# ಪ್ರಿಯಸಂಗಮ

"ಇಳಿದು ಬಾ ತಾಯಿ, ಇಳಿದು ಬಾ
ಹರನ ಜಟೆಯಿಂದ....ಹರಿಯ ತೊಡೆಯಿಂದ....ಋಷಿಯ ಅಡಿಯಿಂದ....
ಇಳಿದು ಬಾ...."

ಬೇಂದ್ರೆಯವರ ಆ ಕವನವನ್ನು ಇಂಪಾದ ಧ್ವನಿಯುಳ್ಳ ಹೆಣ್ಣುಮಗ ಬ್ಬಳು ರೇಡಿಯೋದಿಂದ ಹಾಡುತ್ತಿದ್ದಳು. ರೇಡಿಯೋ ಮುಂದಿದ್ದ ಎತ್ತರವಾದ ರ್ಚಿಯ ಮೇಲೆ ಕುಳಿತು, ಗಲ್ಲಕ್ಕೆ ಕೈಯಿಟ್ಟು, ಕವನಕ್ಕೆ ಕಿವಿ ಕೊಟ್ಟಿದ್ದ ನಿಯ ದೃಷ್ಟಿ ಮಾತ್ರ ದೂರದಲ್ಲಿ ಆಟವಾಡುತ್ತಿದ್ದ ತಂಗಿಯಲ್ಲೇ ನಾಟಿತ್ತು.

ಅಂಬೆಗಾಲಿಕ್ಕುತ್ತಾ ತನ್ನನ್ನು ಸಮೀಪಿಸುತ್ತಿದ್ದ ಗಂಗಳನ್ನು ನೋಡಿದಾಗ ನಿಯ ತುಟಿಗಳು ತೆರೆದುಕೊಂಡವು. ನಿಜ....ಇಳಿದು ಬರುತ್ತಿತ್ತು, ಹರನ ಡೆಯಿಂದಲೂ ಅಲ್ಲ....ಋಷಿಯ ಅಡಿಯಿಂದಲೂ ಅಲ್ಲ....ಪುಟ್ಟ ತಂಗಿ ಗೆಯ ಮುದ್ದು ಬಾಯಿಂದ ಜೊಲ್ಲು ಹನಿಹನಿಯಾಗಿ ಇಳಿದು ಬರುತ್ತಿತ್ತು. ಗೆಯ ಪುಟ್ಟ ಗುಲಾಬಿ ಹೂವಿನಂತಿದ್ದ ತುಟಿಗಳ ಮೇಲೆ ಜೊಲ್ಲು ಇಬ್ಬನಿಯ ಗಳಂತೆ ಕಾಣಿಸುತ್ತಿತ್ತು. ಜೊಲ್ಲು ತುಟಿಗಳಿಂದ ಚಿಮ್ಮಿ, ಗಂಗೆಯ ದುಂಡು ದ ಮೇಲುರುಳಿ, ಎದೆಯ ಮೇಲೆ ಹರಡಿಕೊಂಡಿದ್ದ ಹಸಿರು ಬಣ್ಣದ ಲಂಗದ ಲೆ ನಿಧಾನವಾಗಿ ತೊಟ್ಟಿಕ್ಕುತ್ತಿತ್ತು. ಆ ಮನಮೋಹಕವಾದ ದೃಶ್ಯವನ್ನು ನಿ ನೋಡುತ್ತಿದ್ದಳು.

ಗಂಗ ಅಂಬೆಗಾಲಿಕ್ಕುತ್ತಾ ಬಂದು ಅಕ್ಕನನ್ನು ಸಮೀಪಿಸಿದಳು.

ಆದರೆ ?....ಅಕ್ಕ ಎತ್ತರವಾದ, ಕೈಗೆ ಎಟುಕದಂತಹ ಸಿಂಹಾಸನದ ಮೇಲೆ ತಿರುವಂತೆ ಗಂಗೆಗೆ ತೋರಿತು.

ಉಬ್ಬಿದ ಕೆನ್ನೆಗಳ ಮರೆಯಲ್ಲಿ ಹೊಳೆಯುತ್ತಿದ್ದ ಎರಡು ಹೊಳಪಾದ ಕಣ್ಣು ತನ್ನನ್ನೇ ದಿಟ್ಟಿಸಿ ನೋಡುತ್ತಿರುವುದನ್ನು ನಳಿನಿ ಗಮನಿಸಿದಳು. ಅವಳು ...ನ ನೋಡುತ್ತಿದ್ದ ಹಾಗೆ ಗಂಗೆ ನಿಧಾನವಾಗಿ ಎದ್ದು ನಿಂತುಕೊಂಡಳು. ಬೆನ್ನಕು ಕಾಲುಗಳ ಆಸರೆಯಲ್ಲಿ ದೇಹ ಎದ್ದು ನಿಂತಿತು.

ಮ್ಮಾ....ಬೇಗ ಬಾಮ್ಮ. ಗಂಗ ನಿಂತುಕೊಂಡುಬಿಟ್ಟಿದ್ದಾಳೆ!"

ತಾವ ಉತ್ಸಾಹದಿಂದ ಚಪ್ಪಾಳೆ ತಟ್ಟಿ ಅಡಿಗೆ ಮನೆಯಲ್ಲಿದ್ದ ತಾಯಿಗೆ ತೊಗೋ

ಹೊಸ ಸಮಾಚಾರವನ್ನು ಸಂಭ್ರಮದಿಂದ ಕೂಗಿ ಹೇಳಿದಳು. ಕುಮುದ ಧಾವಿಸಿ ಹಜಾರಕ್ಕೆ ಬಂದು ನಿಂತಾಗ, ನಿಂತುಕೊಂಡು ಬೆರಗು ಕಣ್ಣುಗಳಿಂದ ನೋಡುತ್ತಿದ್ದ ಮಗಳನ್ನು ಕಂಡಳು. ಅವಳಿಗೂ ಸಂಭ್ರಮವೇ! ಕಾರಣ, ಎಂಟು ತಿಂಗಳು ತುಂಬಿ ಒಂಭತ್ತರಲ್ಲಿ ಅದೇ ತಾನೇ ಕಾಲಿಡುತ್ತಿದ್ದ ಗಂಗ ನಿಂತು ನಿಂತುಕೊಂಡಾಗ ಅವಳಿಗೆ ಸಂಭ್ರಮದಲ್ಲೂ ಸಂತೋಷವಾಯಿತು.

"ಬಾ ಮರಿ....ಬಾ...."

ನಿಂತುಕೊಂಡಿರುವ ಮಗು ಪುಟ್ಟ ಪುಟ್ಟ ಹೆಜ್ಜೆ ಇಟ್ಟು ತನ್ನ ಕಡೆಗೆ ನಡೆದು ಬರುವಂತೆ ಕುಮುದ ಮಗಳನ್ನು ಪ್ರೋತ್ಸಾಹಿಸಿದಳು. ಯಾವ ಆಸರೆಯು ದೇಹಕ್ಕಿಲ್ಲದಿದ್ದುದರಿಂದ ಗಂಗ ನಿಂತಲ್ಲಿಯೇ ನಿಂತುಕೊಂಡಳು. ಸ್ವಲ್ಪ ದೂರದ ನಿಂತು ತೋಳುಗಳನ್ನು ತನಗಾಗಿ ತೆರೆದು ಕರೆಯುತ್ತಿರುವ ತಾಯಿಯನ್ನು ಸಮೀಪಿಸುವ ಬಯಕೆ ಗಂಗೆಯದು! ಅವಳು ಎರಡು ಹೆಜ್ಜೆ ಮುಂದಿಟ್ಟು ಕುಕ್ಕರಿಸಿಕೊಂಡಳು. ಆ ಕೆಲಸವೇ ಅವಳಿಗೆ ಮಹತ್ಕಾರ್ಯವಾಗಿತ್ತು.

"ನನ್ನ ಚಿನ್ನ....ಒಂಭತ್ತನೇ ತಿಂಗಳಿನಲ್ಲೇ ನಡೆದುಬಿಟ್ಯಾಮ್ಮಾ!"

ಕುಮುದ ಮಗಳನ್ನು ಕೈಗೆತ್ತಿಕೊಂಡು ಮಮತೆಯಿಂದ ಮುದ್ದಿಸಿದಳು.

"ಗಂಗ ನಡೆದುಬಿಟ್ಟಳು ಅಣ್ಣ....!"

"ನಿಜವಾಗಿ....?" ಮಾಧವ ನಂಬದವನಂತೆ ಹುಬ್ಬೇರಿಸಿ ಕೇಳಿದ.

ಕುಮುದ ತೋಳೊಳಗಿದ್ದ ಮಗುವನ್ನು ಮುದ್ದಿಸುತ್ತಲೇ 'ಹೂಂ' ಗುಟ್ಟಿದಳು.

"ಮಹಾ ಬಜಾರಿ! ಇವಳಿಗೆ ಮಾತೂ ಬೇಗ ಬಂದುಬಿಡುತ್ತೆ...."

ಮಾಧವ ಹೆಂಡತಿಯ ತೋಳೊಳಗಿದ್ದ ಮಗಳ ತಲೆಯನ್ನೊಮ್ಮೆ ಪ್ರೀತಿಯಿಂದ ನೇವರಿಸಿದ.

ಎಲ್ಲರಿಗೂ ಸಂಭ್ರಮವೇ! ಆದರೆ ಇವರೆಲ್ಲರ ಸಂಭ್ರಮದಲ್ಲಿ ಗಂಗ ಮಾತ್ರ ಭಾಗಿಯಾಗಲಿಲ್ಲ. ಅವಳ ತೆರೆದ ಕಣ್ಣುಗಳಲ್ಲಿ ಗಾಬರಿಯಿತ್ತು. ಆಶ್ಚರ್ಯದಿಂದ ಅವಳ ಕಣ್ಣುಗಳು ಅಗಲವಾಗಿ ತೆರೆದುಕೊಂಡಿದ್ದವು.

'ಯಾಕೆ ಇವರೆಲ್ಲಾ ನನ್ನನ್ನು ನೋಡಿ ಈ ರೀತಿ ಸಂಭ್ರ... ಇದ್ದಾರೆ?'

ಎಂಬ ಪ್ರಶ್ನೆ ಅವಳ ಮುದ್ದು ಮುಖದಲ್ಲಿ ಎದ್ದು ನಿಂತಿತ್ತು.

ಮುಗಿಯಲಿದ್ದ ಕವನಕ್ಕೆ ನಳಿನಿ ಮತ್ತೆ ಕಿವಿಗೊಟ್ಟಳು. ...ದೆ

ಅಡಿಗೆಯ ಕೆಲಸವನ್ನು ಜ್ಞಾಪಿಸಿಕೊಂಡು ಕುಮುದ ಅಡಿ... ...ರಿ

ಕೊಂಡಳು. ಮಾಧವ ಮುದ್ದು ಮಗಳನ್ನು ಎತ್ತಿಕೊಂಡೇ ಕುರ್ಚಿಯ ಮೇಲೆ ಕುಳಿತುಕೊಂಡ.

ಮಾಧವ ಮಂಡ್ಯದಲ್ಲಿ ವಕೀಲನಾಗಿದ್ದ. ತಕ್ಕಮಟ್ಟಿಗೆ ಸಂಪಾದಿಸುತ್ತಾ, ನೆಮ್ಮದಿಯಿಂದ ಸಂಸಾರ ನಿರ್ವಹಣೆ ಮಾಡುತ್ತಿದ್ದ. ಇಬ್ಬರು ಮುದ್ದಾದ ಹೆಣ್ಣು ಮಕ್ಕಳು ಅವನ ಮನೆಯನ್ನು ನಂದಗೋಕುಲವನ್ನಾಗಿ ಮಾಡಿದ್ದರು. ಅವನ ಕೈ ಹಿಡಿದಿದ್ದ ಕುಮುದ ಎಲ್ಲ ವಿಧದಲ್ಲೂ ಜಾಣೆ. ಅವಳಿಗೆ ಮನೆಯ ಮತ್ತು ಆ ಎರಡು ಮಕ್ಕಳ ಜವಾಬ್ದಾರಿಯನ್ನೆಲ್ಲಾ ನಿಶ್ಚಿಂತೆಯಿಂದ ವಹಿಸಿಕೊಟ್ಟ ಮಾಧವ ತನ್ನ ಕೆಲಸವನ್ನು ಮಾತ್ರ ತಲೆಗೆ ಹಚ್ಚಿಕೊಂಡಿದ್ದ.

ಮಾಧವನಿಗೆ ಪಿತ್ರಾರ್ಜಿತವಾಗಿ ಬಂದ ಸಂಪತ್ತೆಂದರೆ ಮಂಡ್ಯದಲ್ಲಿ ಒಂದು ದೊಡ್ಡ ಮನೆ. ಅದಕ್ಕಾಗಿಯೇ ಅವನು ಅಲ್ಲಿದ್ದುಕೊಂಡು ವಕೀಲ ವೃತ್ತಿಯನ್ನು ಪ್ರಾರಂಭಿಸಿದ್ದ. ಆ ದೊಡ್ಡ ಮನೆಗಿದ್ದ ಕಾಂಪೌಂಡೂ ಸಹ ವಿಶಾಲವಾಗಿದ್ದು ಎಲ್ಲ ಬಗೆಯ ಹಣ್ಣು ಹೂವಿನ ಗಿಡಗಳೂ ಅಲ್ಲಿದ್ದವು. ಮನೆಯ ಹಿಂಭಾಗದಲ್ಲಿ ಎರಡು ಪುಟ್ಟ ಸಂಸಾರಗಳಿಗೆ ಅನುಕೂಲವಾದ ಎರಡು ಮನೆಗಳಿದ್ದವು. ಮಾಧವ ಅವುಗಳನ್ನು ಬಾಡಿಗೆಗೆ ಕೊಟ್ಟುಬಿಟ್ಟಿದ್ದ.

* * * *

"ಕರಿಯಪ್ಪಾ...."

"ಸ್ವಾಮಿ....?"

ಮಾಧವ ನೆಲದ ಮೇಲೆ ಮುದುಡಿ ಕುಳಿತಿದ್ದ ಕಕ್ಷಿಗಾರನ ಕಡೆ ಒಂದು ಬಾರಿ ದರ್ಪದಿಂದ ನೋಡಿದ. ಅನಂತರ ಅವನ ಕಣ್ಣುಗಳು ಬೆಂಚಿನ ಮೇಲೆ ಕುಳಿತಿದ್ದ ನಾಲ್ಕಾರು ಜನ ಕಕ್ಷಿಗಾರರ ಮೇಲೆ ಓಡಾಡಿದವು.

"ನಾನು ಹೇಳಿಕೊಟ್ಟಿರುವಂತೆ ನಾಳೆ ನೀನು ಕೋರ್ಟಿನಲ್ಲಿ ಧೈರ್ಯವಾಗಿ ಹೇಳಬೇಕು. ಹೇಗೆ ಹೇಳ್ತೀಯ ಒಂದು ಬಾರಿ ಈಗ ನನ್ನ ಮುಂದೆ ಹೇಳು ನೋಡೋಣ...."

ಮಾಧವ ಕೈಯೊಳಗಿದ್ದ ಪೆನ್ನನ್ನು ಮೇಜಿನ ಮೇಲಿಟ್ಟು, ಕಾಲು ನೀಡಿ ಬೆನ್ನನ್ನು ಕುರ್ಚಿಗೆ ಒರಗಿಸಿದ.

"ನಾನು, ಚೆನ್ನ ಹೊಲದ ವಿಷಯ ಮಾತನಾಡ್ತಿದ್ವು....ಆಗ ಅವನು ನನ್ನ ತಾವ ಜಗಳ ಆಡ್ದಾ, ನಂಗೂ ಕ್ವಾಪ ಬಂತು....ಕೈಯ್ಯಲ್ಲಿದ್ದ ಮಚ್ಚು ತೊಗೊಂಡು ಬೀಸ್ದೆ....ಅವನ ಕುತ್ತಿಗೆಗೇ ಏಟು ಬಿತ್ತು...."

"ನಿಲ್ಲಿಸೊ....ನಿಲ್ಲಿಸೊ ನಿನ್ನ ಮಾತನ್ನು....ನಿನ್ನಂಥಹವರನ್ನು ಕಟ್ಟಿಕೊಂಡು ನಾನು ಬಾವಿಗೆ ಬೀಳಬೇಕು. 'ನಾನು ಮಚ್ಚಿನಲ್ಲಿ ಹೊಡೆದೆ....ಅವ ಸತ್ತ' ಅಂತ ನೀನು ನ್ಯಾಯಾಧೀಶರ ಮುಂದೆ ಹೇಳು, ನಿನ್ನ ಕುತ್ತಿಗೆಗೆ ಉರುಲು ಹಾಕ್ತಾರೆ ಅವರು. ಹೋಗು....ಹಾಳಾಗಿ ಹೋಗು...."

ಮಾಧವ ಅಸಹನೆಯಿಂದ ಅಬ್ಬರಿಸಿದ.

"ನಿಮ್ಮ ಪಾದ....ಕ್ಷಾಪ ಮಾಡಿಕೋಬೇಡಿ ದೇವರು. ಏನು ಹೇಳಬೇಕು ಅಂತ ಸರಿಯಾಗಿ ಹೇಳಿಕೊಡಿ...."

ಕರಿಯಪ್ಪ ಕೈಮುಗಿದು ದೈನ್ಯದಿಂದ ಅಂಗಲಾಚಿ ಬೇಡಿದ.

"ಅಣ್ಣ ಊಟಕ್ಕೆ ಬರ್ಬೇಕಂತೆ...."

ನಳಿನಿ ಹಜಾರದ ಬಾಗಿಲ ಬಳಿ ತಲೆ ಹಾಕಿ ಹೇಳಿದಳು.

"ಬರ್ತೀನಿ....ಬರ್ತೀನಿ....ಇಷ್ಟು ಬೇಗ ಏನು ಅವಸರ....?"

ಕರಿಯಪ್ಪನ ಮೇಲಿದ್ದ ಸಿಟ್ಟಿನ ಮುದ್ದೆಯ ಒಂದು ಚೂರು ನಳಿನಿಯ ಕಡೆ ಸಿಡಿಯಿತು.

"ಅಣ್ಯಾ...." ತೊದಲು ಮಾತು ತಡೆ ತಡೆದು ತೇಲುತ್ತಾ ಬಂದು ಮಾಧವನ ಕಿವಿಗಳನ್ನು ಸವರಿದಾಗ, ಅವನು ಹಿಂತಿರುಗಿ ನೋಡಿದ.

"ಗಂಗ! ನೀನೊಬ್ಬಳೆ ಇಲ್ಲಿಯವರೆವಿಗೂ ನಡೆದುಕೊಂಡು ಬಂದುಬಿಟ್ಯಾ?"

ಮಾಧವ ತಪ್ಪು ಹೆಜ್ಜೆಗಳನ್ನಿಡುತ್ತಾ ತನ್ನನ್ನು ಸಮೀಪಿಸುತ್ತಿದ್ದ ಮಗಳನ್ನು ಎತ್ತಿಕೊಂಡು ಮುದ್ದಿಸಿದ. ಅವಳನ್ನು ಮುದ್ದಿಸುತ್ತಲೇ ಮಾಧವ ಒಳಗೆ ಹೊರಟುಹೋದಾಗ, ರಾಯರ ಅನಿರೀಕ್ಷಿತ ನಿರ್ಗಮನದಿಂದ ಕಕ್ಷಿಗಾರರು ಬೆಪ್ಪಾಗಿ ಒಬ್ಬರ ಮುಖ ಮತ್ತೊಬ್ಬರು ನೋಡಿಕೊಂಡರು. ಮಗಳ ಮುದ್ದು ಮುಖದ ಹಿಂದೆ ಮಾಧವನ ಕರ್ತವ್ಯ ಮರೆಯಾಯಿತು.

ಸಾಯಂಕಾಲದ ಪ್ರಕೃತಿಯ ಸೊಬಗು ಆಹ್ಲಾದಕರವಾಗಿತ್ತು. ಬೀಸುವ ಗಾಳಿಗೆ ತೆಂಗಿನ ಗರಿಗಳು ಅಲುಗಿ ಶಬ್ದ ಮಾಡುತ್ತಿದ್ದವು. ಆ ಶಬ್ದ ದೂರದಿಂದ ಮಧುರವಾದ ಸಂಗೀತದಂತೆ ಕೇಳಿಸುತ್ತಿತ್ತು.

ಆದರೆ....ತರಕಾರಿ ಹೆಚ್ಚಿಸುತ್ತಾ ರಾತ್ರಿಯ ಅಡಿಗೆಯ ತಯಾರಿಕೆಯಲ್ಲಿದ್ದ ಕುಮುದಳ ಮನಸ್ಸಿಗೆ ಮಾತ್ರ ನೆಮ್ಮದಿಯಿರಲಿಲ್ಲ. ಪ್ರಕೃತಿ ಸೌಂದರ್ಯ ಅವಳ ಪಾಲಿಗೆ ಇಲ್ಲವಾಗಿತ್ತು.

"ನಳಿನಿ....ನಿಮ್ಮಣ್ಣ ಬಂದರೆ ನೋಡು."

"ಕಾಫಿ, ತಿಂಡಿ ಕೊಡ್ತೀಯಾ....?"

ಕುಮುದಳ ಮಾತಿಗೆ ಮಾಧವನೇ ಮಾತನಾಡುತ್ತಾ ಅಡಿಗೆ ಮನೆಯ ಬಾಗಿಲಿಗೆ ಬಂದು ನಿಂತುಕೊಂಡ.

"ಇಷ್ಟು ಹೊತ್ತು ಯಾಕಾಯ್ತು ?"

ತಟ್ಟೆಯಲ್ಲಿ ಆರೆಂಟು ಬೋಂಡಗಳನ್ನಿಡುತ್ತಾ ಕುಮುದ ಗಂಡನ ಹೊತ್ತು ಗೊತ್ತುಗಳ ಬಗ್ಗೆ ತನಿಖೆಗೆ ಪ್ರಾರಂಭಿಸಿದಳು.

"ಇವತ್ತು ಹುಲಿವಾನದ ಕರಿಯಪ್ಪನ ಕೇಸಿತ್ತು. ಹೊಲದ ವಿಷಯವಾಗಿ ಅಣ್ಣನನ್ನೇ ಮಚ್ಚಿನಿಂದ ಹೊಡೆದು ಕೊಂದುಹಾಕಿದ್ನಲ್ಲಾ....ಅವನ ಕೇಸಿನ ತೀರ್ಪು ಇವತ್ತು ಕೊಟ್ಟರು."

"ಅವನು ನಿರಪರಾಧಿ ಎಂದು ಕೋರ್ಟಿನಲ್ಲಿ ತೀರ್ಪು ಕೊಟ್ಟರು ತಾನೆ ?"

"ಹುಂ....ನೀನು ಹೇಗೆ ಊಹೆ ಮಾಡಿದೆ ಕುಮುದ ?"

ಮಾಧವನಿಗೆ ಎಲ್ಲಿಲ್ಲದ ಆಶ್ಚರ್ಯ !

"ನೀವು ಅವನ ಪರ ಲಾಯರಾದ ಮೇಲೆ ಅವನಿಗೆ ಬಿಡುಗಡೆಯಾಗದೆ ಇರುತ್ಯೆ ?"

"ನಿನ್ನ ಮಾತು ನಿಜಾನ್ನು. ಅವನನ್ನು ಬಿಡುಗಡೆಮಾಡಿಸೋದಕ್ಕೆ ನಾನು ಎಷ್ಟು ಕಷ್ಟಪಟ್ಟೆ ಅಂತ ಕುಮುದ ? ಅವನ ತಲೆಯ ತುಂಬ ಇದ್ದದ್ದು ಬರಿಯ ಮಣ್ಣು ಮುದ್ದೆ. ಅವನ ಕೈಲಿ ನಾಲ್ಕು ಸುಳ್ಳುಮಾತು ಹೇಳಿಸುವಂತೆ ತಯಾರು ಮಾಡೋದರಲ್ಲಿ ನನ್ನ ಅರ್ಧ ಆಯಸ್ಸೇ ಕಡಿಮೆಯಾಗಿಹೋಯ್ತು. ಅಂತೂ ಅವನು ಕೊಲೆಮಾಡಿ ಬಚಾವಾದ...."

ಮಾಧವ ತಟ್ಟೆಯೊಳಗಿದ್ದ ಬೋಂಡವನ್ನು ಬಾಯಿಗೆಸೆದುಕೊಳ್ಳುತ್ತಾ ಹೇಳಿದ.

"ಏನು ಲಾಯರು ಕೆಲಸಾನೊ ? ಸುಳ್ಳುಮಾತು, ಸುಳ್ಳು ಸಾಕ್ಷ್ಯಗಳಿಂದ ನೀವುಗಳು ಸತ್ಯವನ್ನೇ ಮುಚ್ಚಿಬಿಡ್ತೀರಿ."

"ಅಷ್ಟಲ್ಲದೆ ಸಾವಿರಾರು ರೂಪಾಯಿ ಸಂಪಾದನೆ ಮಾಡೋದಕ್ಕೆ ಸಾಧ್ಯವೆ? ಈ ಕೇಸಿನಲ್ಲಿ ನನಗೆ ಆರುಸಾವಿರ ರೂಪಾಯಿ ಸಂಪಾದನೆ ಆಯ್ತು. ಮನೆಗೆ ಮಹಡಿ ಹಾಕಿಸೋಣ ಅಂತಿದೀನಿ...."

"ನೋಡಿ....ಮಗೂಗೆ ಜ್ವರ ಬಂದುಬಿಟ್ಟಿದೆ, ಔಷಧಿ ತಂದುಕೊಡಿ...."

ಗಂಡನಲ್ಲಿ ಹೇಳಬೇಕೆಂದಿದ್ದ ವಿಷಯ ಕುಮುದಳಿಗೆ ನೆನಪಾಯಿತು.

"ಸ್ವಲ್ಪ ಮೈ ಬೆಚ್ಚಗಾಗಿದ್ದಕ್ಕೆಲ್ಲಾ ಡಾಕ್ಟರ ಹತ್ತಿರ ಶೀಷೆ ಹಿಡಿದುಕೊಂಡು ಓಡೋದೆ ? ನಿನ್ನೆ ಮಗೂಗೆ ಹೊಸ ಲಂಗ ಹಾಕಿ ದೇವಸ್ಥಾನಕ್ಕೆ ಕರೆದು

ಕೊಂಡು ಹೋಗಿದ್ದೆ. ಎಲ್ಲೋ ದೃಷ್ಟಿ ಆಗಿರಬೇಕು. ಕಡ್ಡಿ ನೀವಳಿಸಿ ಹಾಕು, ಹುಷಾರಾಗ್ತಾಳೆ ಗಂಗ...."

ಮಾಧವನಿಗೆ ತಿಳಿದಿದ್ದ ಮದ್ದು ಅದೊಂದೆ ! ಆ ಮದ್ದಿನಿಂದ ಎಲ್ಲ ಬಗೆಯ ಕಾಯಿಲೆಗಳೂ ನಿವಾರಣೆಯಾಗುವುದೆಂಬ ಅಚಲವಾದ ನಂಬಿಕೆ ಅವನದು !!

ಮಾಧವನಿಗೆ ತಿಳಿದಿದ್ದ ಮದ್ದಿನಿಂದ ಗಂಗೆಯ ಜ್ವರ ನಿಲ್ಲಲಿಲ್ಲ. ಡಾಕ್ಟರಿಂದ ನಾಲ್ಕಾರು ಚುಚ್ಚುಮದ್ದುಗಳ ಪ್ರಯೋಗವಾದ ಮೇಲೆ ಜ್ವರ ಇಳಿಮುಖ ವಾಯಿತು. ಒಂದು ವಾರದ ನಂತರ ಸಂಪೂರ್ಣವಾಗಿ ಜ್ವರ ನಿಂತಿತು.

"ಕಾಫಿ ತೊಗೊಳ್ಳಿ...."

ಹೆಂಡತಿಯ ಮಾತಿಗೆ ಯಾವ ಪ್ರತಿಕ್ರಿಯೆಯನ್ನೂ ನೀಡದೆ ಅಂಗಳದಲ್ಲಿ ಕುಳಿತಿದ್ದ ಗಂಗೆಯನ್ನೇ ಮಾಧವ ದಿಟ್ಟಿಸುತ್ತಿದ್ದ.

* * * *

ಒಂದು ದಿನ ನಳಿನಿ ತಂಗಿಯೊಡನೆ ಬಣ್ಣದ ಚೆಂಡಿನೊಡನೆ ಆಟವಾಡು ತ್ತಿದ್ದಳು. ನಳಿನಿ ಎಸೆದ ಚೆಂಡು ಗಂಗಳಿಂದ ನಾಲ್ಕಾರು ಮಾರು ದೂರದಲ್ಲಿ ಹೋಗಿ ಬಿತ್ತು. ತಪ್ಪು ಹೆಜ್ಜೆಗಳನ್ನಿಡುತ್ತಾ ನಡೆದು ಹೋಗಿ ಗಂಗ ನಳಿನಿಯು ನಿರೀಕ್ಷಿಸಿದ್ದಂತೆ ಚೆಂಡನ್ನು ಕೈಗೆ ತೆಗೆದುಕೊಳ್ಳಲಿಲ್ಲ. ಕುಳಿತ ಸ್ಥಳದಿಂದ ತಂಗಿ ಕದಲದಿರುವುದನ್ನು ಕಂಡು ಅಕ್ಕ ಸಿಡುಕಿದಳು.

"ಎದ್ದು ಹೋಗಿ ಚೆಂಡು ತಂದುಕೊಡೆ....ಸೋಮಾರಿ."

ಗಂಗ ಆಸೆ ತುಂಬಿದ ಕಣ್ಣುಗಳಿಂದ ಆ ಬಣ್ಣದ ಚೆಂಡನ್ನು ನೋಡಿದರೂ ಏಳಲಿಲ್ಲ....ಅದರ ಕಡೆ ಅವಳು ಹೆಜ್ಜೆ ಹಾಕಲಿಲ್ಲ.

"ಬಾ....ಬಾ....ಬಾ...." ಮಾಧವ ತೋಳುಗಳೆರಡನ್ನೂ ಮಗುವಿನ ಕಡೆ ಚಾಚಿದ. ನೀಡಿದ ತನ್ನ ತೋಳುಗಳೊಳಗೆ ನಡೆದುಬಂದು ಬೀಳುವ ಮಗಳನ್ನು ಅಪ್ಪಿ ಮುದ್ದಾಡುವ ಬಯಕೆ ಮಾಧವನದಾಗಿತ್ತು. ಆದರೆ ಗಂಗ ಆ ಸ್ಥಳದಿಂದ ಚಲಿಸಲಿಲ್ಲ. ಮಾಧವನೇ ಹತ್ತಿರ ಬಂದು, ಬಾಗಿ ಚಾಪೆಯ ಮೇಲೆ ಕುಳಿತಿದ್ದ ಮಗುವನ್ನು ಎತ್ತಿಕೊಂಡ.

"ಗಂಗ ಈಗ ನಡೆಯುತ್ತಲೇ ಇಲ್ಲ. ನಿಂತುಕೊಳ್ಳುವುದನ್ನೂ ಸಂಪೂರ್ಣ ವಾಗಿ ಮರೆತುಬಿಟ್ಟಿದ್ದಾಳೆ."

ಕುಮುದ ಮತ್ತೊಮ್ಮೆ ಎಚ್ಚರಿಸಿ ಗಂಡನ ಕೈಯಲ್ಲಿ ಕಾಫಿಯ ಲೋಟವ ನ್ನಿಡುತ್ತಾ ಹೇಳಿದಳು.

"ನಾನೂ ಅದನ್ನು ಗಮನಿಸಿದೆ. ಜ್ವರದಿಂದ ಮಗುವಿಗೆ ಬಹಳ ನಿಶ್ಯಕ್ತಿ

ಯಾಗಿದೆ. ಸ್ವಲ್ಪ ದಿವಸ ಚೇತರಿಸಿಕೊಳ್ಳುವುದಕ್ಕೆ ಅವಳಿಗೆ ಅವಕಾಶ ಕೊಡು. ಆಮೇಲೆ ಮನೆಯಿಂದ ಹೊರಗೆ ಓಡ್ತಾಳೆ...."

"ಹೌದೇನು ಗಂಗ ?"

ತಾಯಿಯ ಪ್ರಶ್ನೆಗೆ ಗಂಗ ತನ್ನ ದುಂಡು ತಲೆಯನ್ನೊಮ್ಮೆ ಅಲುಗಿಸಿದಳು. ಅವಳ ಹವಳದ ತುಟಿಗಳು ಅರಳಿ ನಾಲ್ಕು ಪುಟ್ಟ ಹಲ್ಲುಗಳು ಹೊರಗೆ ತಲೆ ಹಾಕಿದವು.

"ಅಡಿಗೆ ಆಯಿತೆ ಕುಮುದಮ್ಮ ?"

ಹಿಂದುಗಡೆ ಮನೆಯೊಂದರಲ್ಲಿ ಬಾಡಿಗೆಗಿದ್ದ ಪದ್ಮಾವತಮ್ಮ ಹಿತ್ತಲ ಬಾಗಿಲಿಂದ ಕುಮುದಳ ಮನೆಗೆ ಬಂದರು. ಅವರಿಗಿಂತ ಮುಂಪಾಗಿ ಎರಡು ಬೃಹದಾಕಾರವಾಗಿ ಬೆಳೆದು ಉಬ್ಬಿ ನಿಂತಿದ್ದ ಅವರ ಹಲ್ಲುಗಳು ಕುಮುದಳಿಗೆ ಕಾಣಿಸಿಕೊಂಡವು. ಆ ಎರಡು ಹಲ್ಲುಗಳು ತಮ್ಮ ಯಜಮಾನಿಯ ಆಗಮನವನ್ನು ಇತರರಿಗೆ ಸೂಚಿಸುವಂತಿದ್ದವು.

"ಹೂಂ....ಆದ ಹಾಗೆ ಪದ್ಮಾವತಮ್ಮ. ಸಾರಿಗೆ ಹುಳಿ ಕಿವುಚಿ ಹಾಕ್ಬಿ ಒಗ್ಗರಣೆ ಹಾಕಿದರೆ ಅಡಿಗೆ ಮುಗಿದ ಹಾಗೆ ಅನ್ನಿ."

"ಒಂದು ಲೋಟ ಸಕ್ಕರೆ ಇದ್ದರೆ ಕೊಡ್ತೀರಾ ? ಸಾಯಂಕಾಲ ನಮ್ಮ ಅನಂತು ಮನೆಗೆ ಬಂದ ಕೂಡಲೆ ಅಂಗಡಿಯಿಂದ ತರಿಸಿಕೊಡ್ತೀನಿ...."

ಪದ್ಮಾವತಮ್ಮ ತಮ್ಮ ಬಾಯಿಯ ಒಳಗಿದ್ದ ನಾಲ್ಕಾರು ಹಲ್ಲುಗಳನ್ನೂ ಪ್ರದರ್ಶಿಸುತ್ತಾ ದೇಶಾವರಿ ನಗೆ ನಕ್ಕರು. ಆಗ ಅವರ ಮುಖ ಉಗ್ರನರಸಿಂಹ ಸ್ವಾಮಿಯನ್ನು ನೆನಪಿಗೆ ತಂದುಕೊಡುವಂತಿತ್ತು. ಆಕೆಯ ಕೋರೆ ಹಲ್ಲುಗಳ ನಗ್ನಸ್ವರೂಪದ ದರ್ಶನ ಸ್ಪಷ್ಟವಾಗಿ ಕಾಣಿಸಿದಾಗ ಕುಮುದಳ ಮೈ ಕ್ಷಣಕಾಲ ಭಯದಿಂದ ನಡುಗಿತು.

"ಹೂಂ...." ಕುಮುದಳಿಗೆ ಆಕೆಯ ಮುಖವನ್ನು ಹೆಚ್ಚುಹೊತ್ತು ನೋಡುವ ಧೈರ್ಯವಾಗದೆ ಅಡಿಗೆಮನೆ ಕಡೆ ಹೆಜ್ಜೆ ಹಾಕಿದಳು.

ಬೆಳ್ಳಿಯ ಬಟ್ಟಲು ತುಂಬ ಸಕ್ಕರೆಯನ್ನು ತುಂಬಿ ತಂದು ಕುಮುದ ಬಟ್ಟಲನ್ನು ಪದ್ಮಾವತಮ್ಮನ ಮುಂದಿಟ್ಟಳು.

"ಕುಮುದಮ್ಮ....ಯಾಕೋ ನೀವು ಬಹಳ ಇಳಿದುಹೋಗಿದೀರ. ಯಾಕೆ, ಹುಷಾರಿಲ್ಲವೆ ?"

ಪದ್ಮಾವತಮ್ಮ ತಮಗೆ ಮಸ್ತೆ ಕೊಟ್ಟ ಮನೆಯೊಡತಿಯನ್ನು ಬಹಳ ಆತ್ಮೀಯವಾಗಿ ಪ್ರಶ್ನಿಸಿದರು.

"ಈಗ ಆರು ತಿಂಗಳಿಂದ ವಿಪರೀತ ಹೊಟ್ಟೆನೋವು ಬರ್ತಾ ಇದೆ...."

ಆ ಉತ್ತರ ಕುಮುದಳಿಂದ ಬಂದಾಗ ಅವಳ ಮುಖ ವಕ್ರವಾಯಿತು.

"ಹೆಂಗಸರಿಗೆ ಹೊಟ್ಟೆನೋವು ಬರಬಾರದು. ತಡಮಾಡದೆ ಡಾಕ್ಟರಿಗೆ ಹೋಗಿ ತೋರಿಸಬಾರದೆ ?"

"ಕುಮುದ, ಕೋರ್ಟಿಗೆ ಹೊತ್ತಾಯ್ತು....ಬಡಿಸುತ್ತೀಯಾ ?"

ಮಾಧವ ಅದೇ ತಾನೇ ಸ್ನಾನ ಮುಗಿಸಿದ್ದುದರಿಂದ, ಅವನ ಕೈ ದಪ್ಪ ಟವಲಿನ ಸಹಾಯದಿಂದ ಬೆನ್ನು ಒರಸುತ್ತಿತ್ತು.

"ಬರ್ತೀನಮ್ಮ....ಖಂಡಿತ ಸಾಯಂಕಾಲ ಸಕ್ಕರೆ ತರಿಸಿಕೊಡ್ತೀನಿ."

ಮಾಧವನ ಧ್ವನಿ ಕೇಳಿಸಿದ ಕೂಡಲೆ ಪದ್ಮಾವತಮ್ಮ ಮನೆಗೆ ಹೋಗುವ ಯೋಚನೆ ಮಾಡಿದರು.

ಪದ್ಮಾವತಮ್ಮನವರ ವಯಸ್ಸು ಐವತ್ತು ದಾಟಿದ್ದರೂ, ನಾಲ್ಕುವರ್ಷವಿನ್ನೂ ದಾಟದ ಮಗು ಅವರ ಮನೆಯಲ್ಲಿತ್ತು. ಆಕೆಯ ಪತಿರಾಯ ಶಿವನಂಜಪ್ಪ ತಿಂಗಳಿಗೆ ನೂರು ರೂಪಾಯಿಯ ಹೊಸದಾದ ನೋಟೊಂದನ್ನು ತಂದು ಹೆಂಡತಿಯ ಕೈಲಿರಿಸುತ್ತಿದ್ದರು. ಆ ಒಂದು ನೋಟಿನ ಸಹಾಯದಿಂದ ಹತ್ತು ಜನರ ಜೀವನವನ್ನು ನಡೆಸಲು ಪದ್ಮಾವತಮ್ಮ ಶ್ರಮಿಸುತ್ತಿದ್ದರು. ಏಳು ಜನ ಗಂಡುಮಕ್ಕಳಾದ ಮೇಲೆ ತಂದೆ ತಾಯಿಗಳಿಗೆ ಕನ್ಯಾದಾನದ ಫಲವನ್ನು ಕೊಡಲು ಹುಟ್ಟಿದವಳು ಮಾಲಿನಿ. ತಂದೆ ತಾಯಿಗಳ ರೂಪು ಹೆದರಿಕೆ ಹುಟ್ಟಿಸುವಂತಿದ್ದರೂ ಮಾಲಿನಿ ತುಂಬಾ ಮುದ್ದಾದ ಹುಡುಗಿ. ಶಿವನಂಜಪ್ಪನವರು ಗಂಡುಮಕ್ಕಳ ಕಣ್ಣು ತಪ್ಪಿಸಿ ಮಗಳಿಗೆ ಪ್ರತಿದಿನವೂ ಅಂಗಡಿಯಿಂದ ಚೂರು ಮಿಠಾಯಿಯನ್ನು ತಂದುಕೊಡುತ್ತಿದ್ದರು. ಪ್ರತಿದಿನವೂ ಪದ್ಮಾವತಮ್ಮ ಏನಾದರೊಂದು ನೆವಮಾಡಿಕೊಂಡು ಬಂದು, ಕುಮುದಳಿಂದ ಸಕ್ಕರೆಯನ್ನೋ, ಅಕ್ಕಿಯನ್ನೋ, ಬೇಳೆಯನ್ನೋ ತೆಗೆದುಕೊಂಡು ಹೋಗುವ ಪದ್ಧತಿಯನ್ನು ಬಹಳ ವರ್ಷಗಳಿಂದ ತಪ್ಪದಂತೆ ನಡೆಸಿಕೊಂಡು ಹೋಗುತ್ತಿದ್ದರು. ತೆಗೆದುಕೊಂಡು ಹೋದ ಸಾಮಾನು ಮತ್ತೆ ಹಿಂತಿರುಗಿ ಬರುವುದಿಲ್ಲವೆಂದು ಕುಮುದಳಿಗೆ ಗೊತ್ತಿದ್ದರೂ, ಆಕೆಯ ಬಡತನಕ್ಕೆ ಮರುಗಿ, ಅವರು ಕೇಳಿದ ಪದಾರ್ಥವನ್ನು ಕೊಟ್ಟು ಕಳುಹಿಸುತ್ತಿದ್ದಳು.

* * * *

ಆಸ್ಪತ್ರೆಯ ಕೊಠಡಿಯ ಮುಂದುಗಡೆ ಹಾಕಿದ್ದ ದೊಡ್ಡ ಬೆಂಚೊಂದರ ಮೇಲೆ ಹತ್ತಾರು ಮಹಿಳೆಯರು ಕಾದು ಕುಳಿತಿದ್ದರು. ಕುಮುದ ಗಂಗಳನ್ನು

ತೊಡೆಯ ಮೇಲೆ ಕೂರಿಸಿಕೊಂಡು ಬೆಂಚಿನ ಕೊನೆಯಲ್ಲಿ ಕುಳಿತಳು. ಅವಳ ದೃಷ್ಟಿ ಆ ಕೊಠಡಿಯ ಮುಚ್ಚಿದ ಬಾಗಿಲಮೇಲಿತ್ತು.

"ಕುಮುದಮ್ಮ...."

ಸಿಸ್ಟರ್ ಕೂಗಿದ ಕೂಡಲೆ ಕುಮುದ ಕೊಠಡಿಯ ಒಳಗೆ ಧಾವಿಸಿದಳು. ಮನೆಯಲ್ಲಿ ಮಗುವನ್ನು ನೋಡಿಕೊಳ್ಳುವವರು ಯಾರೂ ಇಲ್ಲದೆ ಇದ್ದುದರಿಂದ ಕುಮುದ ಮಗುವಿನೊಡನೆ ಆಸ್ಪತ್ರೆಗೆ ಬಂದಿದ್ದಳು.

"ಆರು ತಿಂಗಳಿಂದ ಹೊಟ್ಟೆನೋವು ಬರ್‍ತಾ ಇದೆ....

ಸರಿಯಾಗಿ ಊಟ, ತಿಂಡಿ ಸೇರೋದಿಲ್ಲ....

ವಿಪರೀತ ಆಯಾಸ, ಬಳಲಿಕೆಯಾಗುತ್ತದೆ...."

ಕುಮುದ ತನ್ನ ದೇಹಸ್ಥಿತಿಯ ಪರಂಪರೆಯನ್ನು ಮುತ್ತು ಪೋಣಿಸಿದಂತೆ ಡಾಕ್ಟರರ ಮುಂದೆ ವರ್ಣಿಸಿ ಹೇಳಿದಳು. ಆದರೆ ಡಾಕ್ಟರಿಂದ ಯಾವ ಉತ್ತರವೂ ಬರಲಿಲ್ಲ. ಕುಮುದ ಆಶ್ಚರ್ಯದಿಂದ ತಲೆ ಎತ್ತಿ ನೋಡಿದಳು.

ಕಾರಣ.... ಆ ಲೇಡಿ ಡಾಕ್ಟರ್ ತೆರೆದ ಕಣ್ಣುಗಳಿಂದ ತನ್ನನ್ನು ನೋಡದೆ ತನ್ನ ಕಂಕುಳಲ್ಲಿ ಬೆರಳು ಚೀಪುತ್ತಿರುವ ಗಂಗೆಯನ್ನೇ ನುಂಗುವಂತೆ ನೋಡುತ್ತಿದ್ದಾರೆ ! ಗರ ಬಡಿದವರಂತೆ, ರೆಪ್ಪೆ ಅಲುಗಿಸದೆ ಗಂಗೆಯನ್ನು ಗಮನಿಸುತ್ತಿದ್ದ ಡಾಕ್ಟರ ನಡವಳಿಕೆ ಕುಮುದಳಿಗೆ ಬಹಳ ವಿಚಿತ್ರವಾಗಿ ತೋರಿತು.

"ವಯಸ್ಸೆಷ್ಟು ?" ಡಾಕ್ಟರಿಂದ ಪ್ರಶ್ನೆಯೊಂದು ಚಿಮ್ಮಿಬಂದಾಗ ಕುಮುದ ತಡವರಿಸದೆ ಉತ್ತರ ಕೊಟ್ಟಳು.

"ಮೂವತ್ತು...."

"ನಾನು ಕೇಳಿದ್ದು ನಿಮ್ಮ ವಯಸ್ಸನ್ನಲ್ಲ....ನೀವು ಎತ್ತಿಕೊಂಡಿರುವ ಮಗುವಿನ ವಯಸ್ಸು."

"ಜುಲೈ ತಿಂಗಳಿಗೆ ಮೂರು ವರ್ಷವಾಗುತ್ತದೆ."

"ಮಗುವಿಗೆ....ನಡೆಯುವುದಕ್ಕಾಗುವುದಿಲ್ಲ....ಅಲ್ಲವೆ ?"

ಆ ಮಾತು ಡಾಕ್ಟರಿಂದ ತಡೆತಡೆದು ಬಂದಿತು.

"ಇಲ್ಲ...." ಕುಮುದಳಿಂದ ಬಂದ ಉತ್ತರ ಆಕೆಗೆ ಅನಿರೀಕ್ಷಿತವಾಗಿರಲಿಲ್ಲ. ಮಗುವನ್ನು ನೋಡಿದ ಕೂಡಲೆ ಆಕೆಗೆ ವಿಷಯ ತಿಳಿದುಹೋಗಿತ್ತು.

"ಒಂದು ದಿನವೂ ಮಗು ನಡದೇ ಇಲ್ಲವೆ ?"

"ಗಂಗ ಒಂಭತ್ತನೆಯ ತಿಂಗಳಿಗೇ ನಡೆಯುತ್ತಿದ್ದಳು. ಅವಳು ಹತ್ತು

ತಿಂಗಳು ತುಂಬುವುದರೊಳಗಾಗಿ ಮನೆಯಲ್ಲೆಲ್ಲಾ ಓಡಾಡುತ್ತಿದ್ದಳು. ಒಂದು ದಿನ ಜ್ವರ ಬಂತು. ಆ ಜ್ವರ ಬಂದಾಗಿನಿಂದ ಅವಳು ನಡವೇ ಇಲ್ಲ. ಮಗುವಿಗೆ ನಿಶ್ಶಕ್ತಿಯಾಗಿ, ನಡಗೆ ಸ್ವಲ್ಪ ನಿಧಾನವೇನೋ ಅಂತ...."

"ನೀವು ಈ ಮಗುವಿನ ತಾಯಿ ತಾನೆ ?"

"ಹೌದು."

"ನಿಜವಾದ ಸಂಗತಿಯನ್ನು ಹೇಳಿಬಿಡ್ತೇನೆ. ಬೇಜಾರು ಮಾಡ್ಕೋಬೇಡಿ. ಸರಿಯಾದ ಡಾಕ್ಟರಿಗೆ ತಡಮಾಡದೆ ಈ ಮಗುವನ್ನು ತೋರಿಸಿ"

"ಯಾಕೆ ? ಮಗು ಈಗ ಹುಷಾರಾಗೇ ಇದೆಯಲ್ಲ...."

"ನಿಮ್ಮ ಮಗುವಿನ ಕಾಲಿಗೆ....ಬಲಗಾಲಿಗೆ ನಡೆಯುವ ಶಕ್ತಿಯಿಲ್ಲ. ಆ ಶಕ್ತಿಯನ್ನು ಸಂಪೂರ್ಣವಾಗಿ ಬಲಗಾಲು ಕಳೆದುಕೊಂಡಿದೆ. ಪೋಲಿಯೊ ಕಾಯಿಲೆಯಿಂದ ನಿಮ್ಮ ಮಗು ಒಂದು ಕಾಲನ್ನು ಕಳೆದುಕೊಂಡಿದೆ...."

"ಪೋಲಿಯೋ ಎಂದರೇನು ?" ಕುಮುದಳ ಪ್ರಶ್ನೆಯಲ್ಲಿ ಮುಗ್ಧತೆಯಿತ್ತು.

ಡಾಕ್ಟರ ಮಾತು ನವಿರಾಗಿ ಬಂದರೂ, ಅದು ಕುಮುದಳನ್ನು ನಡುಗಿಸಿತು. ಆಕೆ ಗಂಗಳ ಬಲಗಾಲನ್ನು ಹಿಡಿದು ಪರೀಕ್ಷಿಸಿದಳು. ಸತ್ತುಹೋದ, ಜೋತು ಬಿದ್ದ ಪಕ್ಷಿಯಂತೆ ಕೃಶವಾಗಿದ್ದ ಗಂಗೆಯ ಬಲಗಾಲು ನೆಪಮಾತ್ರಕ್ಕೆ ದೇಹಕ್ಕಂಟಿಕೊಂಡಿತ್ತು.

"ಬೆನ್ನೆಲುಬಿನ ಒಳಗಡೆ ಉದ್ದಕ್ಕೂ ಇರುವ ಸ್ಪೈನಲ್‌ಕಾರ್ಡಿನಲ್ಲಿರುವ ಬೂದುಬಣ್ಣದ ವಸ್ತು ಕೆಂಪಗೆ ಊದಿಕೊಂಡರೆ, ಅದರಿಂದ ಈ ರೀತಿಯ ಅನರ್ಥಗಳುಂಟಾಗುವುದು. ಕಾಲಿನ ನರಗಳು ಶಕ್ತಿಯನ್ನು ಕಳೆದುಕೊಂಡು ದುರ್ಬಲವಾಗಿವೆ...."

"ಹಾಗಾದರೆ....ನನ್ನ ಮಗು ಎಂದೆಂದಿಗೂ ನಡೆಯಲಾರದೆ ?"

ಕುಮುದ ಭಯಕಂಪಿತ ಧ್ವನಿಯಲ್ಲಿ ಡಾಕ್ಟರನ್ನು ಪ್ರಶ್ನೆಮಾಡಿದಳು. ಅವಳು ಮಗುವನ್ನು ಮತ್ತಷ್ಟು ಬಿಗಿಯಾಗಿ ಹಿಡಿದು ತನ್ನ ಎದೆಗೆ ಒತ್ತಿಕೊಂಡಳು. ಅವಳ ಬಿಗಿತ ಮಗುವಿಗೆ ರಕ್ಷಣೆಯನ್ನು ಕೊಡುವಂತಿತ್ತು.

"ನಿಮ್ಮ....ನಿಮ್ಮ ಮಗುವಿನ ಅದೃಷ್ಟ ಚೆನ್ನಾಗಿದ್ದರೆ ಅದು ಸಾಧ್ಯವಾಗಬಹುದು...."

ಅಡ್ಡಗೋಡೆಯ ಮೇಲಿಟ್ಟ ದೀಪದಂತೆ ಡಾಕ್ಟರು ಉತ್ತರ ಕೊಟ್ಟಾಗ ಕುಮುದ ಭಯದಿಂದ ನಡುಗಿದಳು. ಆ ಎಳೆಯ ಕಂದನ ಭಗ್ನವಾದ ಭವಿಷ್ಯವನ್ನು ತಿಳಿದು ಅವಳ ಕಣ್ಣಿಗೆ ಕತ್ತಲೆ ತುಂಬಿಕೊಂಡಂತಾಯಿತು.

ತನ್ನ ಕಾಯಿಲೆಯ ವಿಷಯವಾಗಿ ಸಲಹೆ ಪಡೆಯಲು ಬಂದಿದ್ದ ಕುಮುದಳಿಗೆ ಆ ವಿಷಯ ಸಂಪೂರ್ಣವಾಗಿ ಮರೆತುಹೋದಂತಾಯಿತು.

ಡಾಕ್ಟರೇ ಚೀಟಿಯೊಂದರಲ್ಲಿ ಎರಡು ಔಷಧಿಗಳ ಹೆಸರನ್ನು ಬರೆದು ಕುಮುದಳ ಕೈಲಿಟ್ಟರು.

"ಈ ಎರಡು ಔಷಧಿಗಳನ್ನೂ ತೆಗೆದುಕೊಳ್ಳಿ. ಒಂದು ತಿಂಗಳಾದ ಮೇಲೆ ಪರಿಣಾಮವನ್ನು ನನಗೆ ತಿಳಿಸಲು ಮರೆಯಬೇಡಿ...."

ಕುಮುದ ಗಂಗಳನ್ನು ಎತ್ತಿಕೊಂಡು ರೂಮಿನಿಂದ ಹೊರಗೆ ಬಂದಳು.

'ಎಲ್ಲರು ....ಹೊರಗಡೆ ಕಾದು ಕುಳಿತಿರುವವರೆಲ್ಲರೂ ನನ್ನ ಮಗುವಿನ ಕಾಲನ್ನೇ ನೋಡುತ್ತಿದ್ದಾರಲ್ಲವೆ....?'

ಕುಮುದಳ ದೇಹ ಒಂದು ಹಿಡಿಯಾಯಿತು. ಎಲ್ಲರೂ ಗಂಗಳತ್ತ ಬೆರಳು ಮಾಡಿ ತೋರಿಸುತ್ತಿರುವಂತೆ ಅವಳಿಗೆ ಭಾಸವಾಯಿತು. ವೇಗವಾಗಿ ಹೆಜ್ಜೆ ಹಾಕಿ ಮನೆ ಮುಟ್ಟುವುದರಲ್ಲಿ ಅವಳ ದೇಹ ನಿಪ್ರಾಣವಾಯಿತು.

ಮಾಧವ ಕೋರ್ಟಿನಿಂದ ಮನೆಗೆ ಬಂದಾಗ ಸಾಯಂಕಾಲ ಆರರ ಸಮಯ ವಾಗಿತ್ತು. ಅವಸರದಲ್ಲಿ ಬೆಳಿಗ್ಗೆ ಉಂಡುಹೋಗಿದ್ದುದರಿಂದ ಅವನ ಹೊಟ್ಟೆ ಹಸಿವಿನಿಂದ ಪರಿತಪಿಸುತ್ತಿತ್ತು.

ಆದರೆ ಕುಮುದ ಎಲ್ಲಿ—ಕಾಣಿಸುವುದೇ ಇಲ್ಲವಲ್ಲ ?

ಮಾಧವ ಮನೆಗೆ ಬಂದವನೇ ಅಡಿಗೆ ಮನೆಯಲ್ಲಿ ಹೆಂಡತಿಗಾಗಿ ನೋಡಿದ. ಅಲ್ಲಿ ನಗುಮುಖದಿಂದ ಸ್ವಾಗತಿಸುವ ಆ ಮಡದಿಯಾಗಲೀ, ಹೊಗೆಯಾಡುವ ಕಾಫಿಯಾಗಲೀ, ತುಂಬಿದ ತಿಂಡಿ ತಟ್ಟೆಯಾಗಲೀ ಅವನಿಗೆ ಸ್ವಾಗತ ನೀಡಲಿಲ್ಲ.

"ಅಣ್ಣ....ಅಮ್ಮಾ ಅಳ್ತಾ ಇದಾಳೆ...."

ನಳಿನಿ ಅಳುಮುಖದಿಂದಲೇ ತಂದೆಗೆ ಹೇಳಿದಳು.

"ಅಮ್ಮ ಎಲ್ಲಿದ್ದಾಳೆ....?"

"ರೂಮಿನಲ್ಲಿ...." ನಳಿನಿ ಮೆಲ್ಲನೆ ಪಿಸುಗುಟ್ಟಿದಳು.

ಮಾಧವ ವಿಸ್ಮಯದಿಂದ ಹುಬ್ಬೇರಿಸುತ್ತಾ ರೂಮಿನೊಳಗೆ ಕಾಲಿಟ್ಟಾಗ, ಮಂಚದ ಮೇಲೆ ಬಾಗಿಲಿಗೆ ಬೆನ್ನು ಮಾಡಿಕೊಂಡು ಕುಳಿತಿದ್ದ ಹೆಂಡತಿ ಅವನಿಗೆ ಕಾಣಿಸಿದಳು. ಮಾಧವ ಎಂದೂ ಹೆಂಡತಿಯ ಕಣ್ಣೀರು ಕಂಡವನಲ್ಲ. ಯಾವಾಗಲೂ ನಗುಮುಖದಿಂದಿರುತ್ತಿದ್ದ ಹೆಂಡತಿಯ ಕಣ್ಣಿನಲ್ಲಿ ನಿರಂತರವಾಗಿ ಸುರಿಯುತ್ತಿದ್ದ ಕಣ್ಣೀರಿನ ಕೋಡಿಯನ್ನು ಮಾಧವ ಕಂಡು ತಲ್ಲಣಿಸಿದ. ಅವಳ ದೇಹವೆಲ್ಲಾ ಕರಗಿ ನೀರಾಗಿ, ಕಣ್ಣೀರಿನ ಮೂಲಕ ಹೊರಗೆ ಬರುತ್ತಿರುವಂತಿತ್ತು.

"ಕುಮುದ....ಯಾಕೆ....ಏನಾಯ್ತು ?"

ಮಾಧವ ಹೆಂಡತಿಯ ಬೆನ್ನಿನ ಮೇಲೆ ಕೈಯಿಟ್ಟು ಬಹಳ ನವಿರಾಗಿ ಪ್ರಶ್ನಿಸಿದ. ಹೆಂಡತಿಯ ತೋಳಿನ ಅಪ್ಪುಗೆಯಲ್ಲಿದ್ದ ಗಂಗಳನ್ನು ಕಂಡಾಗಲಂತೂ ಮಾಧವನಿಗೆ ಪರಮಾಶ್ಚರ್ಯವಾಯಿತು.

"ಮನಸ್ಸಿಗೆ ಬೇಸರವಾದರೆ, ದುಃಖವಾದರೆ ಈ ಎಳೆಯ ಕಂದನೆದುರಿಗೆ ಕಣ್ಣೀರು ಸುರಿಸುವುದೇ ? ಛಿ ! ಏಳು, ಎದ್ದು ಮುಖ ತೊಳೆದುಕೊ ಕುಮುದ. ನಿನ್ನ ಸ್ಥಿತಿಯನ್ನು ನೋಡಿ ಮಗು ಹೆದರಿಕೊಂಡಿದೆ."

"ಮಾಧವ ಬೆರಗು ಕಣ್ಣುಗಳಿಂದ ತಾಯಿಯನ್ನೇ ನೋಡುತ್ತಿದ್ದ ಗಂಗಳನ್ನು ಎತ್ತಿಕೊಂಡ. ತಂದೆ ನೀಡಿದ ಬಾಹುಗಳೊಳಗೆ ಗಂಗ ಆನಂದದಿಂದ ಚಿಮ್ಮಿದಳು. ತಾಯಿಯ ರೋಧನ ಅವಳಿಗೆ ಬಿಡಿಸಲಾಗದ ಒಗಟಾಗಿತ್ತು.

"ಈ ಮಗುವಿಗಾಗಿಯೇ....ನಾನು....ದುಃಖಿಸುತ್ತಿರುವುದು...."

ಉತ್ತರ ಬಿಕ್ಕಳಿಕೆಯ ನಡುವೆ ನುಸುಳಿ ಬಂದು ಮಾಧವನ ಕಿವಿಯನ್ನು ಮುಟ್ಟಿತು.

"ಏಕೆ ? ಮಗೂಗೆ ಏನಾಗಿದೆ ?"

ಕುಮುದ ತನ್ನ ಅಳಲನ್ನು ಹತೋಟಿಗೆ ತಂದುಕೊಂಡು ಡಾಕ್ಟರು ಹೇಳಿದ್ದ ವಿಷಯವನ್ನೆಲ್ಲಾ ಗಂಡನಿಗೆ ತಿಳಿಸಿದಳು. ಇದೆಲ್ಲವನ್ನೂ ಕೇಳಿದ ಮಾಧವನ ಮುಖ ಗಂಭೀರವಾಯಿತು. ಅವನು ನಿರುತ್ತರನಾದ.

ಹೆಂಡತಿಯ ರೋಧನ ನಿಲ್ಲಿಸಲು ಏನಾದರೊಂದು ಸಮಾಧಾನದ ಮಾತನ್ನು ಅವನಿಗೆ ಹೇಳಬೇಕೆನಿಸಿತು. ಮಾಧವ ಸಾಕಷ್ಟು ಗೆಲುವನ್ನು ಮುಖದ ಮೇಲೆ ತಂದುಕೊಂಡು ಮಾತನಾಡಿದ.

"ಇದು ಇಪ್ಪತ್ತನೆಯ ಶತಮಾನ ಕುಮುದ. ಇಂದಿನ ವಿಜ್ಞಾನ ಜಗತ್ತು ಎಲ್ಲಾ ಖಾಯಿಲೆಗಳನ್ನೂ ಹತೋಟಿಯಲ್ಲಿಡುವ ಸಾಹಸವನ್ನು ನಡೆಸುತ್ತಿದೆ. ಡಾಕ್ಟರಿಗೆ ತೋರಿಸೋಣ, ನೀನು ಇಲ್ಲದ ಚಿಂತೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಕೊರಗಬೇಡ...."

ಕುಮುದ ಪ್ರತಿಯಾಗಿ ಗಂಡನ ತೊಡೆಯ ಮೇಲೆ ತಲೆಯಿಟ್ಟು ಬಿಕ್ಕಿದಳು. ಮಾಧವ ಅವಳ ತಲೆಯನ್ನೊಂದು ಬಾರಿ ಮೃದುವಾಗಿ ನೇವರಿಸಿದ. ಹೆಂಡತಿಗೆ ಸಮಾಧಾನಪಡಿಸಲು, ಅವಳ ಕದಡಿದ ಮನಸ್ಸಿಗೆ ಶಾಂತಿ ತಂದುಕೊಡಲು ನೇವರಿಸುವುದರ ಮೂಲಕ ಅವನು ಪ್ರಯತ್ನಿಸಿದಂತಿತ್ತು.

ಮಾಧವ ತನಗೆ ತುಂಬ ಪರಿಚಯವಿದ್ದ ಡಾಕ್ಟರಲ್ಲಿಗೆ ಮಗಳನ್ನು ಕರೆದು

ಕೊಂಡು ಹೋಗಿ ಅವರ ಸಲಹೆಯನ್ನು ಕೇಳಿದ. ಈ ಕಾಯಿಲೆ ಸಂಪೂರ್ಣವಾಗಿ ಗುಣವಾಗುವುದಿಲ್ಲ. ಮೊದಲಿನ ಶಕ್ತಿ ಕಾಲಿಗೆ ಬರುವುದು ಅಸಾಧ್ಯ ಎಂದು ಅವರು ಮಾಧವನಿಗೆ ಮುಚ್ಚುಮರೆಯಿಲ್ಲದಂತೆ ಹೇಳಿಬಿಟ್ಟರು.

* * * *

ಅವರಿವರ ಸಲಹೆಗಳನ್ನು ಕೇಳಿ ತಿಳಿದುಕೊಂಡ ಕುಮುದ ಮಗಳ ಮೇಲೆ ಅತ್ಯಾಸಕ್ತಿಯಿಂದ ಅವುಗಳನ್ನು ಪ್ರಯೋಗ ಮಾಡಲು ಪ್ರಾರಂಭಿಸಿದಳು.

"ಮೀನಿನ ಎಣ್ಣೆಯನ್ನು ಕಾಲಿಗೆ ಚೆನ್ನಾಗಿ ತಿಕ್ಕಿ, ಸ್ವಲ್ಪ ಕಾಲ ಬಿಸಿಲಿನಲ್ಲಿ ನಿಲ್ಲಿಸಿ, ಅನಂತರ ಮಗುವಿಗೆ ಸ್ನಾನ ಮಾಡಿಸಿ. ಹೀಗೆ ಎರಡು ತಿಂಗಳು ಮಾಡು ವುದರಿಂದ ದುರ್ಬಲವಾಗಿರುವ ಕಾಲಿಗೆ ಶಕ್ತಿ ತುಂಬಿ ಬರುವುದು."

ಅದು ನೆರೆಮನೆಯಾಕೆ ಸುಬ್ಬಮ್ಮ ಕುಮುದಳಿಗಿತ್ತ ಸಲಹೆ.

ಆ ಎಣ್ಣೆಯ ಗಬ್ಬುವಾಸನೆಯನ್ನು ಸಹಿಸಿಕೊಂಡು ತಾಳ್ಮೆಯಿಂದ ಗಂಗ ಕಾಲಿಗೆ ಎಣ್ಣೆಯನ್ನು ತಿಕ್ಕಿಕೊಂಡಳು. ಆ ವಾಸನೆ ತಡೆಯುವುದು ಕುಮುದ ಳಿಗೇ ಸಾಕಾಗಿ ಹೋಯಿತು.

ಮರದ ಕೊಂಬೆಗೆ ಸಿಕ್ಕಿಕೊಂಡು, ಬೀಸುವ ಗಾಳಿಗೆ ಅತ್ತಿಂದಿತ್ತ ತೂಗಾ ಡುವ ಒಣಗಿದ ಎಲೆಯೊಂದನ್ನು ಗಂಗಳ ಬಲಗಾಲು ಕುಮುದಳಿಗೆ ನೆನಪುಮಾಡಿ ಕೊಡುತ್ತಿತ್ತು.

ಆರು ತಿಂಗಳ ಆ ಚಿಕಿತ್ಸೆಯಿಂದ ಯಾವ ಪ್ರಯೋಜನವೂ ಆಗಲಿಲ್ಲ. ನಿರಾಶೆಯಿಂದ ಕುಮುದ ಆ ಎಣ್ಣೆಯ ಪ್ರಯೋಗವನ್ನು ನಿಲ್ಲಿಸಿದಳು.

"ಕುಮುದ....ನಾನೊಂದು ಚಿಕಿತ್ಸೆ ಹೇಳ್ತೀನಿ, ಅದರಿಂದ ಖಂಡಿತವಾಗಿ ನಿನ್ನ ಮಗುವಿಗೆ ಗುಣವಾಗುವುದು...."

"ಅದು ಯಾವ ಚಿಕಿತ್ಸೆ ಕೌಸಲ್ಯ? ಯಾವ ಔಷಧಿ ಅಥವಾ ಚಿಕಿತ್ಸೆ ಯಾದರೂ ಚಿಂತೆಯಿಲ್ಲ. ಎಷ್ಟು ಹಣ ಖರ್ಚಾದರೂ ನಾನು ಯೋಚಿಸುವುದಿಲ್ಲ, ಸಖ್ಯ! ನನ್ನ ಮಗು ಎಲ್ಲರಂತೆ ನಡೆಯುವಂತಾದರೆ ಸಾಕು...."

ಕುಮುದ ಉದ್ರೇಕಗೊಂಡು ಮಾತನಾಡಿದಳು. ಕೌಸಲ್ಯಳ ಮಾತಿನಿಂದ ಅವಳ ಮುಖದ ಮೇಲೆ ಆಶಾಕಿರಣ ಕಾಣಿಸಿಕೊಂಡಿತು. ನಿರ್ಲಿಪ್ತತೆ ಹೊಂದಿದ್ದ ಅವಳ ಕಾಂತಿಹೀನವಾದ ಕಣ್ಣುಗಳಲ್ಲೂ ಹೊಳಪಿನ ಬಳ್ಳಿ ಬಳುಕಿತು.

"ಪ್ರತಿದಿನವೂ ಒಂದು ಡಬ್ಬದಲ್ಲಿ ಮಗುವನ್ನು ನಿಲ್ಲಿಸಿ, ಮಗು ಬೀಳದಂತೆ ಸುತ್ತಲೂ ಕೆಮ್ಮಣ್ಣನ್ನು ನೀರಿನಲ್ಲಿ ಕಲಸಿ ಮೆತ್ತಬೇಕು. ಆ ಡಬ್ಬವನ್ನೇ ಬಿಸಿಲಿ ನಲ್ಲಿ ಎರಡು ಗಂಟೆಗಳ ಕಾಲ ಇಟ್ಟು, ಆಮೇಲೆ ಮಗುವಿಗೆ ಸ್ನಾನ ಮಾಡಿಸು."

ಕುಮುದ ಒಂದು ವರ್ಷದಲ್ಲಿ ಮುಪ್ಪಾದಳು. ದಟ್ಟವಾದ ಮೋಡಗಳ ಮಧ್ಯದಲ್ಲಿ ಇಣುಕುವ ಮಿಂಚಿನ ಬಳ್ಳಿಗಳಂತೆ ಅವಳ ತಲೆಯಲ್ಲಿ ಬಿಳಿಯ ಕೂದಲುಗಳು ಕಾಣಿಸಿಕೊಂಡವು. ಗಂಗೆಯ ಕಾಲಿನ ಬಗ್ಗೆ ಚಿಂತಿಸಿ, ಚಿಂತಿಸಿ, ಅವಳ ಮುಖದಲ್ಲಿ ಹೊಳೆಯುತ್ತಿದ್ದ ಕಣ್ಣುಗಳು ಕಾಂತಿಹೀನವಾಗಿ ಗಾಜಿನ ಕಣ್ಣುಗಳಂತೆ ಕಾಣಿಸುತ್ತಿದ್ದವು. ಗುಳಿಬಿದ್ದ ಕಣ್ಣುಗಳು, ಸುಕ್ಕು ಹಿಡಿದ ಮುಖ, ಬಿಗಿದ ಮೋರೆ ಇವುಗಳು ಕುಮುದಳ ನಗುಮುಖವನ್ನು ಮರೆಮಾಡಿದವು.

ಅಡಿಗೆ ಕೆಲಸಗಳಲ್ಲಿ ಕುಮುದ ಮೊದಲಿದ್ದ ಆಸಕ್ತಿಯನ್ನು ಕಳೆದುಕೊಂಡಳು. ಬಾಯಿಯ ರುಚಿಗೆ, ಕಣ್ಣಿನ ಅಂದಕ್ಕೆ ತಕ್ಕಂತೆ ಬಗೆಬಗೆಯ ತಿಂಡಿಗಳನ್ನು ಮಾಡುವುದರಲ್ಲಿ ಅವಳಿಗಿದ್ದ ಉತ್ಸಾಹ ಕಡಿಮೆಯಾಯಿತು. ಸದಾ ಕಾಲವೂ ಅವಳನ್ನು ಗಂಗೆಯ ಚಿಂತೆ ಹಿಡಿದು ಹಿಂಸಿಸುತ್ತಿತ್ತು. ಆ ಚಿಂತೆಯಲ್ಲಿ ಅವಳು ಮುಪ್ಪಾದಳು. ಯಾವ ಚಿಕಿತ್ಸೆಯನ್ನು ಯಾರು ಸೂಚಿಸಿದರೂ, ಅದನ್ನು ಕುಮುದ ಮಾಡುತ್ತಿದ್ದಳು.

ಕೆಮ್ಮಣ್ಣಿನ ಚಿಕಿತ್ಸೆ ಪ್ರಾರಂಭದ ದಿನ ಕುಮುದಳಿಗಿಂತ ಗಂಗ ಹೆಚ್ಚು ಉತ್ಸಾಹ ತೋರಿಸಿದಳು. ದೊಡ್ಡ ಡಬ್ಬದಲ್ಲಿ ಗಂಗಳನ್ನು ನಿಲ್ಲಿಸಿಕೊಂಡು ನಳಿನಿ ನಿಂತುಕೊಂಡ ಮೇಲೆ ಕುಮುದ ಕಲಸಿದ ಮಣ್ಣನ್ನು ಡಬ್ಬದ ತುಂಬಾ, ಕಾಲುಗಳು ಮುಚ್ಚುವಂತೆ ತುಂಬಿದಳು. ಮಣ್ಣಿನಲ್ಲಿ ನೆಟ್ಟ ಗಿಡದಂತೆ ಗಂಗೆಗೆ ನಿಂತ ಜಾಗದಿಂದ ಒಂದಂಗುಲವೂ ಕದಲಲು ಸಾಧ್ಯವಾಗದಂತಾಯಿತು. ಆದರೂ ಅವಳಿಗೆ ಅದೊಂದು ಆಟವೆ!

ಆ ಆಟದಲ್ಲಿ ಗಂಗ ಉತ್ಸಾಹದಿಂದ ಭಾಗಿಯಾದಳು.

"ಅಮ್ಮಾ....ಅಮ್ಮಾ....ಕತ್ತಿನವರೆಗೂ ಮಣ್ಣು ಹಾಕಮ್ಮ....ಚೆನ್ನಾಗಿರುತ್ತೆ."

ಗಂಗ ಉತ್ಸಾಹದಿಂದ ಕೈ ಚಪ್ಪಾಳೆ ತಟ್ಟಿ ತನ್ನ ಬಯಕೆಯನ್ನು ತಾಯಿಯ ಮುಂದಿಟ್ಟಳು. ಇದೊಂದು ಸಂಭ್ರಮದ ಆಟ, ಈ ಆಟದಲ್ಲಿ ತಾನು ಮುಖ್ಯ ಪಾತ್ರಧಾರಿ ಎಂದು ದೃಢವಾಗಿ ನಂಬಿದ್ದ ಗಂಗ ಸಂತೋಷದಿಂದ ಕೈ ಚಪ್ಪಾಳೆ ತಟ್ಟಿದಳು.

ಆದರೆ ಮಗಳ ಮಾತು ತಾಯಿಯ ಹೃದಯವನ್ನು ಹಿಂಡಿ ನೋಯಿಸಿತು.

"ಬೇಡ ಗಂಗ....ಕತ್ತಿನವರೆವಿಗೂ ಮಣ್ಣು ಮೆತ್ತಿದರೆ ಬಟ್ಟೆಯೆಲ್ಲಾ ಕೊಳಕಾಗುತ್ತದೆ...."

"ಕೊಳೆ ಆದರೆ ನಿಂಗಿ ಒಗೆಯುತ್ತಾಳೆ...."

ಮಾತಿನ ಮಲ್ಲಿ ಗಂಗ ಮಾತಿಗೆ ಮಾತು ಹೆಣೆದಳು. ಕುಮುದ ಮಗಳ ಮಾತಿಗೆ ಉತ್ತರಿಸದೆ ಗಂಗೆಯು ಸಮೇತ ಡಬ್ಬವನ್ನು ಹೊತ್ತು ತಂದು ಅಂಗಳದಲ್ಲಿ ಬಿಸಿಲು ಬೀಳುವ ಸ್ಥಳದಲ್ಲಿಟ್ಟಳು.

"ಗಂಗ....ನೀನು ಇಲ್ಲೇ ಜಾಣೆ ಹಾಗೆ ನಿಂತಿರು. ನಾನು ಬೇಗ ಸ್ನಾನ ಮಾಡಿ ಬಂದು ಬಿಡುತ್ತೇನೆ...."

ಮಾಧವ ಬಿಸಿಲಿನಲ್ಲಿ ನಿಂತಿರುವ ಮಗಳನ್ನು ನೋಡಿದ. ಚಪ್ಪಾಳೆ ತಟ್ಟುತ್ತಾ ಸಂಭ್ರಮ ಪಡುತ್ತಾ ಡಬ್ಬದಲ್ಲಿ ಮುದ್ದೆ ಮಣ್ಣಿನ ಆಸರೆಯಲ್ಲಿ ನಿಂತಿರುವ ಗಂಗೆಯ ಮುಗ್ಧತೆಯನ್ನು ಕಂಡು ಅವನಿಗೆ ಸಂಕಟವಾಯಿತು.

"ಗಂಗೆಯೇ ನಮಗಿಂತ ಸುಖಿ, ನಿಜಸ್ಥಿತಿಯ ಅರಿವು ಅವಳಿಗಿನ್ನೂ ಆಗಿಲ್ಲ. ತಿಳಿದರೆ....ದೇವರೇ....ಅವಳು ಬೆಳೆದು ದೊಡ್ಡವಳಾಗುವುದಕ್ಕಿಂತ ಮುಂಚೆ, ನಿಜಸ್ಥಿತಿಯ ಅರಿವು ಅವಳಿಗಾಗುವುದರಲ್ಲಿ ಅವಳನ್ನು ಈ ಕಷ್ಟದಿಂದ ಪಾರು ಮಾಡು...."

ಕಾಣದ ಸರ್ವಶಕ್ತನಿಗೆ ಕೈ ಜೋಡಿಸಿದ ಮಾಧವ.

"ನನ್ನ ಕೈಗಳಿಂದಲೇ ಮಗುವಿಗೆ ಮಣ್ಣು ಮೆತ್ತುವಂತಾಯಿತಲ್ಲಾ !" ಎಂದು ಕುಮುದ ಸಂಕಟದಲ್ಲಿ ಹೊರಳಾಡಿದಳು.

"ಅಣ್ಣ....ನೀನೂ ಈ ಡಬ್ಬದಲ್ಲಿ ನಿಂತಿಕೊ ಬಾ ಅಣ್ಣ...."

ಮಗಳ ಕರೆ ಯೋಚನೆಯ ಮಾಲೆಯಲ್ಲಿ ಸಿಕ್ಕಿಕೊಂಡಿದ್ದ ಮಾಧವನಿಗೆ ಕೇಳಿಸಲಿಲ್ಲ.

"ನಂಗೆ ಬೇಜಾರು ಕಣಣ್ಣ. ಎಷ್ಟೊತ್ತು ಈ ಬಿಸಿಲಿನಲ್ಲಿ ನಿಂತಿರೋದು ?"

ಗಂಗಳ ಸಂಭ್ರಮ ಕಾಲ ಕಳೆದಂತೆ ಮಾಯವಾಗಿ, ಬೇಸರ ತಲೆಹಾಕಿತು. ಅದು ಪ್ರಾರಂಭದಲ್ಲಿ ಅವಳಿಗೆ ಸಂಭ್ರಮದ ಆಟವಾಗಿ ಕಂಡರೂ, ಕೊನೆಗೆ ಬೇಸರದಲ್ಲಿ ಮುಕ್ತಾಯಗೊಂಡಿತು. ಅವಳ ಸಹನೆಯ ಕಟ್ಟೆ ಒಡೆಯಿತು.

"ನೀನು ತುಂಬಾ ಜಾಣೆ ಅಲ್ವಾ ಗಂಗ....?"

"ಹೌದು...."

ತಂದೆಯ ಪ್ರಶ್ನೆಗೆ ಗಂಗ ತಡವರಿಸದೆ ಉತ್ತರ ಕೊಟ್ಟಳು.

"ನೀನು ಜಾಣೆಯಾದರೆ, ಇನ್ನೂ ಹೀಗೆ ಒಂದು ಗಂಟೆ ನಿಂತಿರಬೇಕು...."

"ಆಗಲಿ...."

ತಂದೆಯೆದುರು ಜಾಣೆಯಾಗಲು ಮತ್ತೆ ಗಂಗ ಡಬ್ಬದಲ್ಲಿ ನಿಂತುಕೊಳ್ಳಲು ಒಪ್ಪಿಕೊಂಡಳು. ಆದರೆ ಒಂದೇ ಒಂದು ನಿಮಿಷ ಮಾತ್ರ!

"ಅಣ್ಣ....ಒಂದು ಗಂಟೇ ಆಯ್ತಲ್ಲ, ನನ್ನ ಎತ್ಕೊ...."

ಗಂಗೆಯ ಭಾಗಕ್ಕೆ ಒಂದು ನಿಮಿಷಕ್ಕೆ ಒಂದು ಗಂಟೆ.

ಮಾಧವ ಮಗಳ ಮಾತು ಕೇಳಿಸದವನಂತೆ ನಟಿಸಿದ. ಗಂಗ ಅಳುವುದಕ್ಕೇ ಪ್ರಾರಂಭಿಸಿದಳು. ಅಡಿಗೆ ಕೆಲಸದಲ್ಲಿದ್ದ ಕುಮುದ ಬಂದು ಮಗಳನ್ನು ಎಷ್ಟು ಸಮಾಧಾನ ಮಾಡಿದರೂ ಅವಳ ಅಳು ನಿಲ್ಲಲಿಲ್ಲ.

ಬಿಸಿಲಿನ ಝಳಕ್ಕೆ ಸಿಕ್ಕಿದ ಗಂಗೆಯ ಮುಖ ಕೆಂಪು ದಾಸವಾಳದ ಹೂವಾಗಿತ್ತು.

"ಅಣ್ಣ....ನಿಮ್ಮ ದಮ್ಮಯ್ಯ....ಎತ್ತಿಕೊಳ್ಳಿ."

ಗಂಗ ಹೃದಯ ಕರಗುವಂತೆ ತಂದೆಯನ್ನು ಅಂಗಲಾಚಿದಳು. ಮಗಳ ಸ್ಥಿತಿಗೆ ಮರುಗಿ ಅವಳ ಆಸೆಯನ್ನು ನೆರವೇರಿಸಲು ಮಾಧವ ಎರಡು ಹೆಜ್ಜೆ ಮುಂದಿಟ್ಟಾಗ, ಕುಮುದ ಗಂಡನನ್ನು ತಡೆದಳು.

"ಅವಳನ್ನು ಖಂಡಿತ ಎತ್ತಿಕೊಬೇಡಿ. ನಾವು ಮಾಡ್ತಾ ಇರೋದು ಅವಳ ಒಳ್ಳೆಯದಕ್ಕೆ ತಾನೆ?"

ಕರಗುತ್ತಿದ್ದ ತನ್ನ ಮನಸ್ಸನ್ನೂ ಹೆಪ್ಪುಮಾಡಿಕೊಂಡು ಕುಮುದ ಗಂಡನನ್ನು ಎದುರಿಸಿದಳು.

ಮಾಧವ ಹೆಂಡತಿಯ ಮಾತಿನಲ್ಲಿದ್ದ ಸತ್ಯತೆಯನ್ನು ಕಂಡುಕೊಂಡ. ಅದಕ್ಕೆ ಅವನು ತಲೆಬಾಗಲೇಬೇಕಾಯಿತು.

"ಗಂಗ....ನೀನು ಹೀಗೆ ನಿಂತಿದ್ರೆ ಕೋತಿ ಕಥೆ ಹೇಳ್ತೀನಿ...."

"ಹೂಂ....ಹೂಂ...." ಗಂಗ ಉತ್ಸಾಹದಿಂದ ಒಪ್ಪಿಕೊಂಡಳು.

ಕೋತಿ ಕಥೆ ಕೇಳುವುದರಲ್ಲಿ ಗಂಗೆಗೆ ಎಲ್ಲಿಲ್ಲದ ಸಂಭ್ರಮ! ಅದನ್ನು ಕೇಳುವುದಕ್ಕಾಗಿ ತನ್ನಲ್ಲಿರುವ ಸರ್ವಸ್ವವನ್ನೂ ತ್ಯಾಗಮಾಡಲು ಅವಳು ಸಿದ್ಧಳಾಗಿದ್ದಳು. 'ಅಕ್ಕಿಯ ಮೇಲಾಸೆ, ನೆಂಟರ ಮೇಲಿಷ್ಟ' ಎನ್ನುವ ಗಾದೆಗೆ ತಕ್ಕಂತೆ ಕ್ಷಣಕಾಲ ಅವಳ ಮನಸ್ಸು ಡೋಲಾಯಮಾನವಾಗಿದ್ದರೂ, ಕೊನೆಗೆ ಕಥೆಯನ್ನು ಕೇಳಲು ಗಂಗ ಒಪ್ಪಿಕೊಂಡಳು.

"ಕೋತಿ ಒಬ್ಬರ ಮನೆ ಮೇಲೆ ಒಂದು ದಿನ ಕೂತಿತ್ತಂತೆ...."

ಮಾಧವ ಕಥೆಯನ್ನು ಪ್ರಾರಂಭಿಸಿದ. ಕಥೆ ಕೇಳುವ ಉತ್ಸಾಹ ಗಂಗೆಗಿದ್ದರೂ, ಬಿಸಿಲಿನ ಧಗೆಗೆ ಸಿಕ್ಕಿದ ಅವಳ ಎಳೆಯ ಮುಖ ಮುದುಡಿಹೋಗಿತ್ತು.

"ಕೋತಿ ಬಾಲ ತುಂಬಾ ದೊಡ್ಡದಾ....?"

ಗಂಗ ಕಣ್ಣರಳಿಸಿ ತಂದೆಯನ್ನು ಪ್ರಶ್ನಿಸಿದಳು. ಕೋತಿಗಿರುವ ವ್ಯಕ್ತಿತ್ವ, ಹಾಗೂ ಪ್ರಾಮುಖ್ಯತೆ ಅದಕ್ಕಿರುವ ಬಾಲದ ಉದ್ದಕ್ಕೆ ತಕ್ಕಂತೆ ಎಂದು ಅವಳು ದೃಢವಾಗಿ ನಂಬಿಬಿಟ್ಟಿದ್ದಳು.

"ಹುಂ....ಅದರ ಬಾಲ ತುಂಬಾ ಉದ್ದಕ್ಕಿತ್ತು...."

ಕೋತಿಯ ಬಾಲದಿಂದಲೇ ಸಾಧಾರಣವಾಗಿ ಕಥೆಯನ್ನು ಪ್ರಾರಂಭಿಸುತ್ತಿದ್ದ ಮಾಧವ ಅಂದು ಮರೆತುಬಿಟ್ಟಿದ್ದ.

"ಇಷ್ಟುದ್ದ ಇತ್ತಾ ಅದರ ಬಾಲ ?"

ಗಂಗ ತನ್ನ ಎರಡು ಪುಟ್ಟ ಕೈಗಳನ್ನೂ ತನ್ನಿಂದ ಸಾಧ್ಯವಾದಷ್ಟು ಉದ್ದಕ್ಕೆ ಚಾಚಿ ತಂದೆಯನ್ನು ಕೇಳಿದಳು.

"ಇನ್ನೂ ಉದ್ದ ಇತ್ತು....ನಮ್ಮ ಮನೆ ಬಾವಿಯಲ್ಲಿ ನೀರು ಸೇದಲು ರಾಟೆಗೆ ಹಾಕಿದ್ದಾರಲ್ಲಾ ಹಗ್ಗ....ಅಷ್ಟು ಉದ್ದ ಇತ್ತು ಆ ಕೋತಿ ಬಾಲ...."

ಮಾಧವ ಮಗಳ ಆಸಕ್ತಿಯನ್ನು ಕೆರಳಿಸಲು ಸುಳ್ಳಿನ ಮರೆಹೊಕ್ಕ.

"ಅಬ್ಬಾ !" ಗಂಗ ತನ್ನ ಪುಟ್ಟ ಬಾಯಿಗೆ ಕಿರುಬೆರಳಿನ ಬೀಗಹಾಕಿದಳು. ಮಗಳ ಬೇಸರಿಕೆಯನ್ನು ಮರೆಸುವ ಸಾಹಸಕ್ಕೆ ಕೈ ಹಾಕಿದ್ದ ಮಾಧವ ಯಶಸ್ವಿಯಾದ.

ಮಾರನೆಯ ದಿನ ಡಬ್ಬವನ್ನು ಹೊತ್ತು ತರುತ್ತಿರುವ ತಾಯಿಯನ್ನು ನೋಡಿದ ಕೂಡಲೇ ಚಾಣಾಕ್ಷೆ ಗಂಗ ಸಂದರ್ಭವನ್ನು ಊಹಿಸಿದಳು. ನಾಲ್ಕು ವರ್ಷದ ಮಗುವಾಗಿದ್ದರೂ ಎದ್ದು, ತಾಯಿಯ ಕೈಗೆ ಸಿಕ್ಕದಂತೆ ಜೂಟಾಟ ಆಡುವ ಸ್ಥಿತಿಯಲ್ಲಿ ಅವಳಿರಲಿಲ್ಲ.

"ನಾನು ಡಬ್ಬದಲ್ಲಿ ಕೂತುಕೊಳ್ಳೋದಿಲ್ಲ....ಉಹುಂ...."

ಗಂಗ ಅಳಲು ಪ್ರಾರಂಭಿಸಿದಳು. ಆದರೆ ಅವಳ ಮೊಂಡುತನ ಕೇಳುವವ ರ್‍ಯಾರೂ ಇರಲಿಲ್ಲ.

ಕ್ರಮೇಣ ಆ ಮಣ್ಣಿನ ಚಿಕಿತ್ಸೆ ಗಂಗೆಗೆ ಒಗ್ಗಿತು. ಅವಳ ಸೂಕ್ಷ್ಮ ದೇಹ ಒರಟಾಯಿತು. ಆದರೆ ಆ ಚಿಕಿತ್ಸೆಯಿಂದ ಅವಳ ಕಾಲಿಗೆ ಯಾವ ಪ್ರಯೋಜನವೂ ಆಗಲಿಲ್ಲ.

* * * *

ಬೇಸಿಗೆಯ ರಜಾ ದಿನಗಳು ಮುಗಿದು, ತರಗತಿಗಳೆಲ್ಲಾ ಪ್ರಾರಂಭವಾದವು.

ಪಾಠಶಾಲೆಗೆ ಹೋಗುವುದನ್ನೂ ಮರೆತು ನಳಿನಿ ಇನ್ನೂ ಹಾಸಿಗೆಯಲ್ಲೇ ಮುಸುಕು ಬೀರಿ ಮಲಗಿರುವುದನ್ನು ಮಾಧವ ಗಮನಿಸಿದ.

"ನಳಿನಿ....ಏಳು....ಸ್ಕೂಲಿಗೆ ಹೋಗೋದಿಲ್ವೇನು ? ಎರಡು ತಿಂಗಳು ಆಟ ಆಡಿದ್ದು ಸಾಲದೇ ?"

ಮಾಧವ ನಳಿನಿಯನ್ನು ನಿದ್ರೆಯಿಂದ ಎಚ್ಚರಗೊಳಿಸುತ್ತಿದ್ದಾಗ, ಸಮೀಪ ದಲ್ಲಿದ್ದ ಚಾಪೆಯ ಮೇಲೆ ಶ್ರದ್ಧೆಯಿಂದ ಕುಳಿತು ಗಂಗ ಪುಸ್ತಕದಲ್ಲಿ ಎ, ಬಿ, ಸಿ, ಡಿ ಬರೆಯುತ್ತಿದ್ದಳು. ನಡೆದು ಶಾಲೆಗೆ ಹೋಗಲು ಗಂಗಳಿಂದ ಸಾಧ್ಯವಿಲ್ಲವೆಂದು ತಿಳಿದ ಮಾಧವ ಮನೆಗೇ ಉಪಾಧ್ಯಾಯರು ಬಂದು ಅವಳಿಗೆ ಪಾಠ ಹೇಳಿಕೊಡು ವಂತೆ ವ್ಯವಸ್ಥೆಮಾಡಿದ್ದ. ನಳಿನಿಯ ವಿದ್ಯಾಭ್ಯಾಸಕ್ಕಿಂತ ಗಂಗೆಯ ವಿದ್ಯಾಭ್ಯಾಸ ದಲ್ಲಿ ಅವನಿಗೆ ಆಸಕ್ತಿಯಿತ್ತು.

ನಳಿನಿ ಸಂಭ್ರಮದಿಂದ ಹಾಸಿಗೆ ಬಿಟ್ಟಿದ್ದಳು. ಶಾಲೆಗೆ ಹೋಗಿ ತನ್ನ ಸ್ನೇಹಿತರನ್ನು ಕಂಡು ಎಂದಿಗೆ ಮಾತನಾಡುವೆನೊ ಎಂಬ ಉತ್ಸಾಹ ಅವಳಿಗೆ !

ಹೊಸ ಲಂಗ ಹಾಕಿಕೊಂಡು ಎರಡು ಜಡೆಗಳಿಗೂ ಕೆಂಪು ಬಣ್ಣದ ರಿಬ್ಬನನ್ನು ಕಟ್ಟಿಕೊಂಡು, ಹೆಗಲಿಗೆ ತೂಗು ಚೀಲವನ್ನು ಸಿಕ್ಕಿಸಿಕೊಂಡು ನಳಿನಿ ಮುಂಬಾಗಿಲಿನಲ್ಲಿ ನಿಂತಿದ್ದ ತಂದೆತಾಯಿಗಳಿಗೆ, ಹೊಸ್ತಿಲ ಬಳಿ ಕುಳಿತಿದ್ದ ತಂಗಿಗೆ ಕೈಬೀಸಿ ಓಡಿಹೋದಳು.

ಅಕ್ಕನ ಸಂಭ್ರಮದ ನಿರ್ಗಮನದಿಂದ ಅಸೂಯೆ ತಾಳಿದವಳೊಬ್ಬಳೇ ! ಅವಳು ಗಂಗ. ಇಡೀ ದಿನವನ್ನೆಲ್ಲಾ ಮನೆಯಲ್ಲೇ ಕುಳಿತು ಕಳೆಯುವುದು ಅವಳಿಗೆ ಬೇಡವಾಗಿತ್ತು. ತನ್ನ ವಯಸ್ಸಿನವರೆಲ್ಲಾ ಆನಂದದಿಂದ ಶಾಲೆಗೆ ಓಡು ತ್ತಿರುವಾಗ, ತಾನೊಬ್ಬಳೇ ಮನೆಯಲ್ಲಿ ಅಜ್ಜಿಯಂತೆ ಕುಳಿತಿರುವುದೆ ?

ಜಗತ್ತು ಒಂದು ದೊಡ್ಡ ಸಂತೋಷ ಸಮಾರಂಭದಲ್ಲಿ, ಉತ್ಸಾಹದಿಂದ ಭಾಗವಹಿಸಿದಂತಿತ್ತು ಗಂಗೆಯ ಪಾಲಿಗೆ.

'ಪಕ್ಕದ ಮನೆಯ ಕಲ್ಪನ ವಯಸ್ಸಿನಲ್ಲಿ ನನಗಿಂತ ಚಿಕ್ಕವಳು. ಆದರೆ ಅವಳು ಶಾಲೆಗೆ ಸೇರಿ ವರ್ಷದ ಮೇಲಾಗಿದೆ....'

'ಎಲ್ಲರೂ ಸುಖಿಗಳು....ಆದರೆ ನಾನೊಬ್ಬಳೇ ದುಃಖಿ ಈಗ....'

'ಈ ಬೆಳ್ಳಿಯ ವೃತ್ತದಲ್ಲಿ ನಾನೊಂದು ಕಪ್ಪು ಚುಕ್ಕಿ.'

ಚಿಂತೆಯ ಬೆಟ್ಟವನ್ನೇ ನೆತ್ತಿಯ ಮೇಲೆ ಹೊತ್ತವಳಂತೆ ಗಂಗ ಯೋಚಿ ಸುತ್ತಾ ಕುಳಿತುಕೊಂಡಳು. ವಯಸ್ಸಿಗೆ ಮೀರಿದ ಗಾಂಭೀರ್ಯ ಅವಳ ಮುಖ ದಲ್ಲಿ ಎದ್ದು ಕಾಣಿಸುತ್ತಿತ್ತು..

"ಅಮ್ಮಾ....ನಾನೂ ನಳಿನಿ ಜೊತೆ ಸ್ಕೂಲಿಗೆ ಹೋಗ್ತೀನಿ...."

ಗಂಗ ತನ್ನ ಮನದಾಸೆಯನ್ನು ತಾಯಿಯ ಮುಂದಿಟ್ಟಳು.

"ನಿನಗೆ ಮನೇಗೆ ಮೇಸ್ಟರು ಬಂದು ಪಾಠ ಹೇಳಿಕೊಡ್ತಾರಲ್ಲ ಗಂಗ...."

ಊಟ ಮಾಡುತ್ತಿದ್ದ ಮಾಧವ ಹೆಂಡತಿಗೆ ಬದಲಾಗಿ ತಾನೇ ಮಗಳಿಗೆ ಉತ್ತರಕೊಟ್ಟ.

"ಒಬ್ಬಳೇ ಪಾಠ ಕಲಿಯುವುದಕ್ಕೆ ನನಗೆ ಇಷ್ಟವಿಲ್ಲ. ಎಲ್ಲರೊಡನೆ ನಾನೂ ಸ್ಕೂಲಿಗೆ ಹೋಗಬೇಕು...."

ಗಂಗ ಹಠ ಹಿಡಿದು ತಂದೆಯನ್ನು ಕೇಳಿದಳು.

"ಆಗಲಿ....ನೀನೂ ಸ್ಕೂಲಿಗೆ ಹೋಗುವಂತೆ."

ಮಾಧವ ಮಗಳಿಗೆ ತಾತ್ಕಾಲಿಕವಾಗಿ ಸಮಾಧಾನ ನೀಡಿದ.

"ಯಾರ ಸಹಾಯವೂ ಇಲ್ಲದೆ ಗಂಗೆಗೆ ನಿಲ್ಲುವುದಕ್ಕೇ ಸಾಧ್ಯವಾಗದಿರುವಾಗ, ಅವಳನ್ನು ನಾವು ಸ್ಕೂಲಿಗೆ ಕಳುಹಿಸುವುದಾದರೂ ಹೇಗೆ ?"

ಕುಮುದ ಮಗಳ ಮರೆಯಲ್ಲಿ ತನ್ನ ಮನಸ್ಸಿನಲ್ಲಿದ್ದ ಸಂಶಯವನ್ನು ಗಂಡನ ಮುಂದಿಟ್ಟಳು.

"ಜವಾನನನ್ನು ಗೊತ್ತುಮಾಡುತ್ತೇನೆ. ಅವನು ಪ್ರತಿದಿನವೂ ಗಂಗಳನ್ನು ಶಾಲೆಗೆ ಕರೆದುಕೊಂಡು ಹೋಗಿ, ಮತ್ತೆ ಮನೆಗೆ ಕರೆದುಕೊಂಡು ಬರಲಿ. ವಿದ್ಯೆ ನಳಿನಿಗಿಂತ ಗಂಗೆಗೇ ಹೆಚ್ಚು ಅಗತ್ಯ. ಮುಂದೆ ವಿದ್ಯೆಯೇ ಅವಳ ಜೀವನಕ್ಕೆ ಒಂದು ದಾರಿಯಾಗಬೇಕು. ಅವಳನ್ನು ವಿದ್ಯೆಯೇ ಕಾಪಾಡಬೇಕು. ಅದರ ಸಹವಾಸದಿಂದಲಾದರೂ ಅವಳು ತನ್ನ ಬೇಸರಿಕೆಯನ್ನು ಮರೆತು ಸುಖಿಯಾಗಲಿ...."

ಮಾಧವ ಸ್ವಲ್ಪ ಉದ್ರೇಕಗೊಂಡು ಮಾತನಾಡಿದ. ಮಾತಿನ ಕೊನೆಯಲ್ಲಿ ಅವನ ಧ್ವನಿ ದುಃಖದಿಂದ ಭಾರವಾಯಿತು.

* * * *

ಗಂಗೆಗೆ ಶಾಲೆಗೆ ಹೋಗುವ ಮೊದಲನೆಯ ದಿನದ ಸಂಭ್ರಮ ! ಮಂಕು ಕವಿದಿದ್ದ ಅವಳ ಮುಖ ಅಪೂರ್ವ ಕಾಂತಿಯಿಂದ ಬೆಳಗುತ್ತಿತ್ತು. ಕಡ್ಡಿಯಂತೆ ಕೃಶವಾಗಿದ್ದ ಮಗಳ ಬಲಗಾಲು ಕಾಣದಂತೆ ಕುಮುದ ಗಂಗೆಗೆ ಕಾಲು ಮುಚ್ಚುವಂತೆ ಲಂಗ ಹಾಕಿ ರಾಮುನ ಸಂಗಡ ಶಾಲೆಗೆ ಕಳುಹಿಸಿದಳು.

ರಾಮು ಶಾಲೆಯ ನೆಲದ ಮೇಲಿದ್ದ ಮರದ ಮಣೆಯ ಮೇಲೆ ಗಂಗಳನ್ನು ಕೂರಿಸಿ ಮನೆಗೆ ಹೊರಟುಹೋದ.

"ನಿಲ್ಲಿಸಿ ನಿಮ್ಮ ಕೂಗಾಟಾನ. ಇದೇನು ಮೀನು ಮಾರುವ ಅಂಗಡೀನೊ ಅಥವಾ ಸಂತೇನೊ....?"

ಸ್ಥೂಲದೇಹದ ಉಪಾಧ್ಯಾಯಿನಿಯೊಬ್ಬಳು ತನ್ನ ಕೀರಲು ಧ್ವನಿಯನ್ನು ಎತ್ತರಿಸಿ ಕಿರುಚಿದಳು.

"ಸಂತೆ...." ಹಿಂದಿನ ಬೆಂಚಿನಿಂದ ದಿಟ್ಟತನದಿಂದ ಪುಟ್ಟ ಹುಡುಗಿಯೊಬ್ಬಳು ಉಪಾಧ್ಯಾಯಿನಿಗೆ ಉತ್ತರ ಕೊಡುವ ಸಾಹಸ ನಡೆಸಿದಳು.

"ಯಾರು ಸಂತೆ ಎಂದಿದ್ದು ? ಎದ್ದು ನಿಂತುಕೊ...."

ಪ್ರತಿಕ್ರಿಯೆ....ಹುಡುಗಿಯರೆಲ್ಲಾ ಮೌನವಾಗಿ ಕುಳಿತುಕೊಂಡರು.

"ಎಲ್ಲರೂ ಎ. ಬಿ. ಸಿ. ಡಿ. ಬರೆದು ನನಗೆ ತೋರಿಸಬೇಕು. ಮೊದಲು ಬರೆದು ತೋರಿಸುವವರಿಗೆ ಬಹುಮಾನ ಕೊಡ್ತೀನಿ...."

ಹುಡುಗಿಯರ ಎಳೆಯ ಕೈಗಳು ಅತ್ಯಂತ ಚುರುಕಾಗಿ ಪೆನ್ಸಿಲ್ಲನ್ನು ಹಿಡಿದು ಬಿಳಿಯ ಹಾಳೆಗಳ ಮೇಲೆ ಓಡಾಡಿದವು.

ಐದು ವರ್ಷಗಳವರೆವಿಗೂ ಗಂಗೆಗೆ ಶಾಲೆಯ ಸಹವಾಸವಿಲ್ಲದಿದ್ದರೂ, ಮನೆಯಲ್ಲೇ ಆಗುತ್ತಿದ್ದ ಪಾಠದಿಂದ ತಕ್ಕಮಟ್ಟಿಗೆ ಓದುವುದನ್ನೂ, ಬರೆಯುವುದನ್ನೂ ಕಲಿತುಕೊಂಡಿದ್ದಳು. ಮೊದಲು ಬರೆದು ಮುಗಿಸಿದ ಗಂಗೆ ತಲೆ ಎತ್ತಿ ನೋಡಿದಾಗ ಎಲ್ಲರೂ ಬರೆಯುವುದರಲ್ಲಿ ಮಗ್ನರಾಗಿದ್ದರು.

ಆದರೆ ಓಡಿಹೋಗಿ ತಾನು ಬರೆದಿರುವುದನ್ನು ಮೇಡಂಗೆ ತೋರಿಸಲು ತನ್ನಿಂದ ಸಾಧ್ಯವೆ ?

ಗಂಗ ಬರೆದು ಮುಗಿಸಿದ್ದರೂ ಮೌನವಾಗಿ ಕುಳಿತುಕೊಂಡಳು.

"ನಾನು ಬರೆದು ಬಿಟ್ಟೆ ಮೇಡಂ...."

ಮಾಲಗಣ್ಣಿನ, ಮೋಟು ಜಡೆಯ ಹುಡುಗಿಯೊಬ್ಬಳು ಮೇಡಂ ಬಳಿ ಓಡಿಹೋದಳು. ತಾನು ಬರೆದಿದ್ದ ಹಾಳೆಯನ್ನು ಅವರ ಮುಂದಿಟ್ಟು, ಜಂಭದಿಂದ ಮಿಕ್ಕ ಹುಡುಗಿಯರ ಕಡೆ ನೋಡಿದಳು.

"ಗುಡ್....ಎಲ್ಲಾ ಸರಿಯಾಗಿದೆ. ಎಲ್ಲರೂ ಬರೆದು ಮೇಜಿನ ಹತ್ತಿರವೇ ತಂದುಬಿಡಿ. ಇಲ್ಲೇ ತಿದ್ದಿ ಕೊಡ್ತೀನಿ...."

ಸ್ಥೂಲದೇಹದ ಆ ಮೇಡಂ ಕುಳಿತ ಕಡೆಯಿಂದ ಕದಲದೆ ಹುಡುಗಿಯರಿಂದ ಕೆಲಸ ತೆಗೆಯುತ್ತಿದ್ದರು.

ಹುಡುಗಿಯರೆಲ್ಲರೂ ಗಲಾಟೆ ಎಬ್ಬಿಸುತ್ತಾ ಮೇಡಂ ಸುತ್ತಲೂ ಕೋಟೆ ಕಟ್ಟಿದರು.

"ಸ್ವಲ್ಪ ಗಾಳಿಯಾಡೋದಕ್ಕೆ ಅವಕಾಶ ಕೊಡಿ. ಎಲ್ಲರೂ ನಿಮ್ಮ ನಿಮ್ಮ ಜಾಗದಲ್ಲಿ ಕುಳಿತುಕೊಳ್ಳಿ. ಆಮೇಲೆ ನೀವು ಬರೆದಿರುವುದನ್ನು ತೆಗೆದುಕೊಂಡು ಹೋಗಿ...."

"ಮೇಡಂ... ನನಗೆ ಬಹುಮಾನ....?"

ಮೊದಲು ಬರೆದು ತೋರಿಸಿದ ಹುಡುಗಿ ಮೇಡಂ ಮಾತನ್ನು ಅವರಿಗೆ ನೆನಪು ಮಾಡಿಕೊಟ್ಟಳು. ಅದರ ವಿಷಯವನ್ನು ಸಂಪೂರ್ಣವಾಗಿ ಮರೆತಿದ್ದ ಆಕೆ ನಗುತ್ತಾ ಕೈಯೊಳಗಿದ್ದ ಸೀಮೆಸುಣ್ಣದ ಚೂರನ್ನು ಆ ಹುಡುಗಿಯ ಕೈಲಿಟ್ಟರು.

"ಇದೇ ಬಹುಮಾನ....ತೆಗೆದುಕೋ...."

ಆ ಹುಡುಗಿ ಆ ಚೂರು ಸೀಮೆಸುಣ್ಣವನ್ನು ಜಂಭದಿಂದಲೇ ಕೈಗೆ ತೆಗೆದುಕೊಂಡಳು. ಚಿನ್ನದ ಪದಕವನ್ನು ಪಡೆದುಕೊಂಡಷ್ಟು ಸಂಭ್ರಮ ಆ ಎಳೆಯ ಹೃದಯಕ್ಕಾಯಿತು.

"ನಿನ್ನ ಹೆಸರೇನಮ್ಮಾ ?"

"ಗಂಗ...."

ಹೊಸ ಮುಖದ ಹುಡುಗಿಯಲ್ಲಿ ಮೇಡಂ ಆಸಕ್ತಿವಹಿಸಿದರು.

"ನೀನು ಎ. ಬಿ. ಸಿ. ಡಿ. ಬರೆದಾಯಿತೆ ?"

"ಹೂಂ...."

"ನನಗೆ ತಂದು ತೋರಿಸಿದೆಯಾ ?"

ಗಂಗ ನಿರುತ್ತರಳಾದಳು. ಅವಳ ಮುಖ ಬಾಗಿ ನೆಲದತ್ತ ಸಾಗಿತು. "ಎದ್ದು ನಿಲ್ಲು. ನಾನು ಪ್ರಶ್ನೆ ಕೇಳುವಾಗಲೆಲ್ಲಾ ನಿಂತುಕೊಂಡು ಉತ್ತರ ಹೇಳಬೇಕು...."

ಸಹನೆ ತಪ್ಪಿ ಆಕೆ ಗಂಗೆಯನ್ನು ಗದ್ದರಿಸಿಕೊಂಡರು. ಗಂಗ ಮುಖ ಮುಚ್ಚಿ ಅಳಲು ಪ್ರಾರಂಭಿಸಿದಳು.

"ಮೇಡಂ....ಆ ಹುಡುಗಿಗೆ ನಿಂತುಕೊಳ್ಳೋದಿಕ್ಕೆ ಆಗೋದಿಲ್ವಂತೆ.... ಇವತ್ತು ಅವರ ಮನೆ ಆಳು ಎತ್ತಿಕೊಂಡು ಬಂದು ಅಲ್ಲಿ ಕೂರಿಸಿಬಿಟ್ಟು ಹೋದ...."

ಹುಡುಗಿಯೊಬ್ಬಳು ಗಂಗೆಯ ಸ್ಥಿತಿಯನ್ನು ಮೇಡಂಗೆ ಸ್ಪಷ್ಟಪಡಿಸಿದಳು.

ಈ ಮಾತು ಉಪಾಧ್ಯಾಯಿನಿಯ ಮುಖಕ್ಕೆ ಚಾವಟಿಯ ಏಟಿನಂತೆ ಬೀಸಿ ಬಂತು. ಕಾರಣ ತಿಳಿಯದೆ ಮಾತು ಬಿರುಸುಮಾಡಿ ಆ ಹುಡುಗಿಯನ್ನು ನೋಯಿಸಿದ್ದಕ್ಕಾಗಿ ಮೇಡಂ ಬಹಳವಾಗಿ ನೊಂದುಕೊಂಡರು. ಆದರೂ ಮುತ್ತು ನೆಲದ ಮೇಲೆ ಬಿದ್ದು ಒಡೆದುಹೋಗಿತ್ತು. ಅದನ್ನು ಸರಿಪಡಿಸುವ ಕೆಲಸ

ಅವರಿಂದಾಗದಿದ್ದರೂ, ಬಿದ್ದ ಚೂರುಗಳನ್ನು ಹೊರಗೆಸೆದು ಆ ಸ್ಥಳವನ್ನು ಶುಭ್ರಗೊಳಿಸುವ ಮನಸ್ಸು ಮಾಡಿದರು.

"ಯಾಕಮ್ಮಾ....ನಿನಗೆ ನಿಂತುಕೊಳ್ಳೋದಿಕ್ಕಾಗೋದಿಲ್ವೆ ?"

ಮೇಡಂ ಗಂಗೆಯ ಸಮೀಪದಲ್ಲಿ ಕುಳಿತು ನವಿರಾಗಿ ಪ್ರಶ್ನೆಮಾಡಿದರು.

"ಉಹುಂ...." ಗಂಗ ಅಳುವಿನ ಮಧ್ಯೆ ಬಿಕ್ಕಿದಳು.

"ಯಾಕೆ....?"

"ಚಿಕ್ಕ ಮಗುವಿದ್ದಾಗ ನನಗೆ ಪೋಲಿಯೊ ಆಗಿ ಕಾಲು ಹೋಯಿತು...."

"ಎರಡು ಕಾಲೂ....?"

"ಬಲಗಾಲು ಮಾತ್ರ...."

ಮೇಡಂ ಗಂಗೆಯ ಬೆನ್ನು ತಟ್ಟಿ, ತಲೆ ಸವರಿ ತಮಾಷೆ ಮಾಡಿ ನಗಿಸಿದರು.

"ಎಲ್ಲರೂ ಕಪ್ಪೆ ಚಿತ್ರ ಬರೆದು ತೋರಿಸಬೇಕು...."

"ಹುಂ....ಹುಂ...." ಹುಡುಗಿಯರೆಲ್ಲರೂ ಉತ್ಸಾಹದಿಂದ ತಲೆಯಾಡಿಸಿದರು.

ಸದಾಕಾಲವೂ ಗಂಟುಮುಖ ಹಾಕಿಕೊಂಡು, ಎಲ್ಲರ ಮೇಲೂ ಸಿಡುಕುತ್ತಿದ್ದ ಮೇಡಂ ಒಮ್ಮೆಲೇ ಹಸನ್ಮುಖಿಯಾದಾಗ ಹುಡುಗಿಯರೆಲ್ಲರೂ ನಿರಾತಂಕವಾಗಿ ಉಸಿರಾಡಿದರು.

ಗಂಟೆ ಬಾರಿಸಿದ ಕೂಡಲೆ ಹುಡುಗಿಯರೆಲ್ಲರೂ ಗುಲ್ಲೆಬ್ಬಿಸುತ್ತಾ ಮೇಡಂನ್ನೂ ಪಕ್ಕಕ್ಕೆ ತಳ್ಳಿ ಹೊರಗೋಡಿದರು. ಆಟದ ಮೈದಾನ ತಲಪುವ ಉತ್ಸಾಹ ಅವರಲ್ಲಿ ಹಲವರಿಗಿದ್ದರೆ, ಮನೆ ಮುಟ್ಟಿ ಹೊಟ್ಟೆ ತುಂಬಿಸಿಕೊಳ್ಳುವ ಆತುರ ಕೆಲವರಿಗೆ. ಕೋಣೆ ಬರಿದಾಗಿದ್ದರೂ, ಗಂಗ ಮಾತ್ರ ಕುಳಿತ ಸ್ಥಳದಿಂದ ಚಲಿಸಲಿಲ್ಲ. ಎಲ್ಲರೊಡನೆ ಅವಳ ಮನಸ್ಸು ಹಕ್ಕಿಯಂತೆ ಹಾರಿಹೋಗಿದ್ದರೂ, ಅವಳ ದೇಹ ಕುಳಿತಲ್ಲೇ ಕುಳಿತುಕೊಂಡಿತ್ತು.

"ನಿಮ್ಮ ಮನೆ ಎಲ್ಲಿದೆ ಗಂಗಾ ?"

ಮೇಡಂ ಗಂಗೆಯನ್ನು ವಾತ್ಸಲ್ಯದಿಂದ ಕೇಳಿದರು.

"ಪ್ರಕಾಶ್ ಕೆಫೆ ಹತ್ತಿರ...."

"ಜವಾನ ಬರ್‍ತ್ತಾನಾ....?"

"ಹುಂ...."

"ಬರ್‍ತೀರಾ ಅಮ್ನೋರಾ ?" ಹಿಂದಿನಿಂದ ಬಂದ ರಾಮು ಹೆಗಲ ಮೇಲಿದ್ದ ಕರವಸ್ತ್ರವನ್ನು ಸರಿಪಡಿಸಿಕೊಳ್ಳುತ್ತಾ ಕೇಳಿದ.

ರಾಮು ಗಂಗಳನ್ನು ಎತ್ತಿಕೊಂಡು ಅವಳ ಪುಸ್ತಕಗಳಿದ್ದ ಚೀಲವನ್ನು ತನ್ನ ಹೆಗಲಿಗೇರಿಸಿದ. ಮೇಡಂ ದೂರ ಸರಿಯುತ್ತಿದ್ದ ಆ ಹುಡುಗಿಯನ್ನೇ ಬಹಳ ಹೊತ್ತು ನೋಡುತ್ತಾ ನಿಂತಿದ್ದರು.

ಶಾಲೆಯ ಆವರಣದಲ್ಲಿ ಮಕ್ಕಳೆಲ್ಲರೂ ಆಟದಲ್ಲಿ ಮೈಮರೆತಿದ್ದರು. ಕುಣಿತ ದಿಂದ ಬೆಳಗಿನಿಂದ ಮನಸ್ಸಿಗುಂಟಾದ ಬೇಸರವನ್ನೆಲ್ಲಾ ಮರೆಯಲು ಆ ಮಕ್ಕಳು ಪ್ರಯತ್ನಿಸುವಂತಿತ್ತು.

ರಾಮುನ ತೋಳಿನ ಮೇಲಿದ್ದ ಗಂಗ ಸುತ್ತಲೂ ಕಣ್ಣು ಹೊರಳಿಸಿಳು.

ಎಲ್ಲರೂ ಕುಣಿದು ಕುಪ್ಪಳಿಸುತ್ತಿದ್ದಾರೆ. ಆ ಭಾಗ್ಯ ತನಗಿಲ್ಲದೇ ಹೋಯಿ ತಲ್ಲ! ಅವರಂತೆ ಓಡಾಡುವುದಿರಲಿ....ನಡೆಯುವ....ನಿಲ್ಲುವ ಶಕ್ತಿಯನ್ನಾದರೂ ದೇವರು ತನಗೆ ಕೊಡಬಾರದಾಗಿತ್ತೆ? ಬೇಡಿದ ವಸ್ತುವನ್ನೆಲ್ಲಾ ದೇವರು ನಮಗೆ ಕೊಡುತ್ತಾನೆ ಎಂದು ಅಮ್ಮ ಹೇಳುತ್ತಾಳಲ್ಲಾ!

ಗಂಗಳ ಐದುವರ್ಷದ ಮನಸ್ಸು ದೇವರನ್ನು ನೆನೆಯಿತು. ಬೇಡಿದ ವಸ್ತು ವನ್ನೆಲ್ಲ ಕೊಡುತ್ತಾನೆ ಆ ದೇವರು ಎಂದು ತಾಯಿಯಾಡಿದ ಮಾತನ್ನು ನೆನೆದು ಗಂಗ ದೇವರಿಗೆ ಕೈ ಮುಗಿದು ಬೇಡಿದಳು.

"ಎಲ್ಲರಂತೆ ನನ್ನ ಕಾಲಿಗೂ ಶಕ್ತಿ ಕೊಡು...."

ಕ್ಷಣಕಾಲ ಸ್ಪ್ರಿಂಗಿನಂತೆ ಚಲಿಸುತ್ತಿದ್ದ ಹುಡುಗಿಯರ ಕಾಲುಗಳನ್ನೇ ನೋಡು ತ್ತಿದ್ದ ಗಂಗಳ ಮುಖದಲ್ಲಿ ಮಂದಹಾಸ ಮಿನುಗಿತು. ಅವರೆಲ್ಲರೂ ಕಣ್ಮರೆಯಾದ ಮೇಲೆ ಅವಳ ದೃಷ್ಟಿ ಕೃಶವಾದ ಬಲಗಾಲಿನ ಕಡೆ ನಿಧಾನವಾಗಿ ಹೊರಳಿ ಕೊಂಡಿತು. ಗಂಗೆಯ ಮಂದಹಾಸ ಮರೆಯಾಯಿತು. ನಿಟ್ಟುಸಿರೊಂದು ಅವಳ ನೊಂದ ಹೃದಯದಾಳದಿಂದ ನುಗ್ಗಿ ಬಂದು ಅವಳ ಎಳೆಯ ದೇಹವನ್ನು ನಡುಗಿಸಿತು.

ಕುಮುದ ಬಾಗಿಲಿನಲ್ಲೇ ನಿಂತು ಮಗಳನ್ನು ಎದಿರುಗೊಂಡಳು.

"ಗಂಗ ಸ್ಕೂಲು ಚೆನ್ನಾಗಿತ್ತೆ? ಮೇಡಂ ಏನು ಪಾಠ ಹೇಳಿಕೊಟ್ಟರು? ನಿನಗೆ ಎಷ್ಟು ಜನರ ಪರಿಚಯವಾಯ್ತು....?"

ಮಗಳ ವಿದ್ಯಾರ್ಥಿ ಜೀವನದ ಪ್ರಾರಂಭ ದಿನದ ಅನುಭವನ್ನು ಅವಳ ಬಾಯಿಂದಲೇ ಕೇಳಿ ತಿಳಿದುಕೊಳ್ಳುವ ಚಪಲ ತಾಯಿಗೆ!

"ಅಮ್ಮಾ....ನಾನು ದೇವರಿಗೆ ಏನು ಕೆಟ್ಟದ್ದು ಮಾಡಿದ್ದನಮ್ಮಾ?"

ತಾಯಿಯ ಪ್ರಶ್ನೆಗಳ ಮಾಲೆಯನ್ನು ಪಕ್ಕಕ್ಕೆ ಒತ್ತರಿಸಿ ಗಂಗ ಗಂಭೀರ ವಾಗಿ ಕೇಳಿದಳು.

"ಯಾಕೆ ಗಂಗ....?"

ಮಗಳ ಅನಿರೀಕ್ಷಿತ ಪ್ರಶ್ನೆ ತಾಯಿಯ ಉತ್ಸಾಹವನ್ನು ಹೊಡೆದುಕೊಂಡು ಹೋಯಿತು. "ದೇವರು ದೊಡ್ಡವನು....ಬಹಳ ಒಳ್ಳೆಯವನು....ನಾವು ಕೇಳಿದ್ದನ್ನೆಲ್ಲಾ ಕೊಡ್ತಾನೆ ಅಂದಿದ್ಯಲ್ಲಾ....ಮತ್ತೆ ಎಲ್ಲರಿಗೂ ಕಾಲುಕೊಟ್ಟು, ನನಗೆ ಯಾಕಮ್ಮ ಕೊಡ್ಲಿಲ್ಲಾ ?"

ಆ ಪ್ರಶ್ನೆ ಗಂಗಳ ಬಾಯಿಂದ ಬಂದಾಗ, ಅವಳ ಮುಖ ಆರು ವರ್ಷದ ಮಗುವಿನಂತಿರಲಿಲ್ಲ. ಗಾಂಭೀರ್ಯ ಹಾಗೂ ಚಿಂತೆಯ ತೆರೆಯ ಮರೆಯಲ್ಲಿ ಅವಳ ಎಳೆಯ ಮುಖ ಮರೆಯಾಗಿತ್ತು.

ಮಗಳ ಪ್ರಶ್ನೆಗೆ ಕುಮುದ ಏನೆಂದು ತಾನೆ ಉತ್ತರಕೊಟ್ಟಾಳು ?

ಈ ಪುಟ್ಟ ಹುಡುಗಿಯ ಪ್ರಶ್ನೆಗೆ ಸರಿಯಾದ ಉತ್ತರ ತನ್ನ ಬಳಿಯಿಲ್ಲ ವಲ್ಲಾ ಎಂದು ಕುಮುದ ಚಿಂತಿಸಿ ಹಣ್ಣಾದಳು.

"ದೇವರಲ್ಲಿ ಭಕ್ತಿಯಿಡು ಗಂಗ. ಖಂಡಿತವಾಗಿ ಇಂದಲ್ಲ ನಾಳೆ ನಿನ್ನ ಆಸೆ ಯನ್ನು ಭಗವಂತ ನೆರವೇರಿಸಿಕೊಡ್ತಾನೆ...."

ಕುಮುದ ಮಗಳ ಮನಸ್ಸಿನಲ್ಲಿ ಭರವಸೆ ತುಂಬಲು ಉತ್ಸಾಹದಿಂದ ಹೇಳಿ ದಳು. ಮಗಳ ಭವಿಷ್ಯದಲ್ಲಿ ಭರವಸೆಯನ್ನಿಟ್ಟುಕೊಂಡಿದ್ದರೂ, ತಾಯಿಯ ಹೃದಯದ ಅಂತರಾಳದಲ್ಲಿ ನಿರಾಶೆಯ ಕರಾಳ ಹಸ್ತವೊಂದು ಖಡ್ಗ ಹಿಡಿದು ಅವಳನ್ನು ಹೆದರಿಸುತ್ತಿತ್ತು.

"ಖಂಡಿತವಾಗಿ ?"

"ನಿಜವಾಗಿ ಗಂಗ...."

ರಾತ್ರಿ ಕುಮುದ ಗಂಡನಿಗೆ ಹಾಸಿಗೆ ಹಾಸಿಕೊಡುತ್ತಿದ್ದಾಗ, ಮಲಗಿದ್ದ ಗಂಗ ಮತ್ತೆ ಹಾಸಿಗೆಯ ಮೇಲೆ ಎದ್ದು ಕುಳಿತುಕೊಂಡಿದ್ದನ್ನು ಗಮನಿಸಿದಳು.

"ದೇವರೇ, ನನ್ನ ಬಲಗಾಲಿಗೆ ಓಡಾಡುವ ಶಕ್ತಿಯನ್ನು ಕೊಡು. ನೀನು ತುಂಬಾ ಜಾಣ, ಒಳ್ಳೆಯವನು ಅಂತ ಅಮ್ಮ ಹೇಳಿದ್ದಾಳೆ. ನೀನು ನನ್ನ ಕಾಲಿಗೆ ಶಕ್ತಿ ಕೊಟ್ಟರೆ ನಾನು ಅಣ್ಣಂಗೆ ಹೇಳಿ ತುಂಬಾ ಪೆಪ್ಪರಮೆಂಟು, ಬಿಸ್ಕತ್ತು, ನೀನು ಕೇಳಿದ್ದನ್ನೆಲ್ಲಾ ಕೊಡಿಸ್ತೀನಿ."

ಗಂಗ ಕಣ್ಮುಚ್ಚಿ, ತುಂಬಿ ಬಂದ ಹೃದಯದಿಂದ ದೇವರನ್ನು ಪ್ರಾರ್ಥಿಸಿ ಕೊಂಡಳು. ಮಗಳ ಮಾತು ತಾಯಿಗೆ ಕೇಳಿಸಿದಾಗ, ಅಳಳಿಗೆ ಏಕಕಾಲದಲ್ಲಿ ದುಃಖ ಸಂತೋಷಗಳೆರಡೂ ಮನಸ್ಸಿಗುಂಟಾಯಿತು. ತನ್ನ ಮಾತಿನಲ್ಲಿ

ವಿಶ್ವಾಸವಿಟ್ಟು ದೇವರನ್ನು ಭಕ್ತಿಯಿಂದ ಬೇಡಿಕೊಳ್ಳುತ್ತಿರುವ ಮಗಳ ನಡವಳಿಕೆಯಿಂದ ಅವಳ ಹೃದಯ ಹಿಗ್ಗಿತ್ತು.

"ಆದರೆ....ಆದರೆ....ಅವಳ ಬೇಡಿಕೆಯನ್ನು ಭಗವಂತ ನಡೆಸಿಕೊಡುವನೆ! ದೇವರೆ, ಅವಳಿಗೆ ನಿರಾಶೆ ಮಾಡಬೇಡ...."

ಕುಮುದ ದೇವರ ಮನೆಯಲ್ಲಿ ನಂದಾದೀಪದ ಬೆಳಕಿನಲ್ಲಿ ಮತ್ತಷ್ಟು ಪ್ರಕಾಶಮಾನವಾಗಿ ಹೊಳೆಯುತ್ತಿದ್ದ ಬೆಳ್ಳಿಯ ಶ್ರೀರಾಮದೇವರ ವಿಗ್ರಹಕ್ಕೆ ಕೈಮುಗಿದಳು.

* * * *

ಪೇಟೆಯ ಬೀದಿಯಲ್ಲಿದ್ದ ಅಹಲ್ಯ ಮಂಗಳಗೌರಿ ಪೂಜೆ ಮಾಡಿ ಕುಮುದಳನ್ನು ಅರಿಶಿನ ಕುಂಕುಮ ಕೊಡಲು ಆಹ್ವಾನಿಸಿದ್ದಳು. ಹೊಸ ಸೀರೆ ಉಟ್ಟು ಕುಮುದ ಚಪ್ಪಲಿ ಮೆಟ್ಟಿಕೊಳ್ಳುತ್ತಿದ್ದಾಗ ರಾಮು ಗಂಗಳನ್ನೆತ್ತಿಕೊಂಡು ಶಾಲೆಯಿಂದ ಮನೆಗೆ ಬಂದ.

"ಅಮ್ಮಾ, ನಿನ್ನ ಜೊತೆಯಲ್ಲಿ ನಾನೂ ಬರ್ತೀನಿ...."

ಅಲಂಕರಿಸಿಕೊಂಡು ಮನೆಯಿಂದ ಹೊರಗೆ ಹೊರಟಿರುವ ತಾಯಿಗೆ ಗಂಗ ಗಂಟುಬಿದ್ದಳು.

ಶಾಲೆಗೆ ಸೇರಿದ ಮೇಲೂ ಗಂಗೆಯ ಒಂಟಿತನ ನೀಗಲಿಲ್ಲ. ರಾಮುನೊಡನೆ ಶಾಲೆಗೆ ಹೋಗಿ ಬರುತ್ತಿದ್ದುದರಿಂದ ಅಕ್ಕನಂತೆ ಗೆಳತಿಯರ ಸಂಗಡ ನಕ್ಕು ನಲಿಯುತ್ತಾ ಹೋಗುವ ಅವಕಾಶದಿಂದ ಗಂಗ ವಂಚಿತಳಾಗಿದ್ದಳು. ಆಟದ ಮೈದಾನಕ್ಕೆ ಕಾಲಿರಿಸದಿದ್ದ ಗಂಗೆಗೆ ಸ್ನೇಹಿತರು ದೊರಕಲೇ ಇಲ್ಲ. ಸಾಯಂಕಾಲ ಮತ್ತೆ ಆಟವಾಡಲು ಮನೆಯಿಂದ ಹೊರಗೆ ಓಡುತ್ತಿದ್ದ ಅಕ್ಕನ ಜೊತೆಯೂ ಗಂಗೆಯ ಪಾಲಿಗೆ ಇಲ್ಲವಾಯಿತು. ರಾತ್ರಿಯ ಅಡಿಗೆಯ ಕೆಲಸದಲ್ಲಿರುತ್ತಿದ್ದ ತಾಯಿಯೊಬ್ಬಳೇ ಅವಳಿಗೆ ಸಿಕ್ಕುತ್ತಿದ್ದ ಜೊತೆ. ಒಂಟಿ ಬಾಳಿನ ಬೇಸರ ಆ ಪುಟ್ಟ ಹುಡುಗಿಯ ಮುಖದಲ್ಲಿ ಹಿರಿಯತನದ ಗಾಂಭೀರ್ಯದ ಬಲೆ ಬೀಸಿತು.

"ಬೇಡ ಗಂಗ. ನೀನು ಇಲ್ಲೇ ಆಡ್ತಾ ಇರು, ನಾನು ಬೇಗ ಬಂದು ಬಿಡ್ತೀನಿ...."

"ಒಬ್ಬಳೇ ಮನೆಯಲ್ಲಿ ಇರೋದಕ್ಕೆ ಬೇಜಾರು...."

ಗಂಗ ಕೆನ್ನೆಯುಬ್ಬಿಸಿ, ತಾಯಿಯ ಹೃದಯ ಕರಗುವಂತೆ ಅಂಗಲಾಚಿದಳು. ಕಣ್ಣೀರಿನ ಕೋಡಿ ಹರಿಸಲು ಸಿದ್ಧಳಾಗುತ್ತಿದ್ದ ಮಗಳನ್ನು ಕಂಡ ಕೂಡಲೆ ಕುಮುದ ಮನಸ್ಸು ಬದಲಾಯಿಸಿದಳು.

ಅಂಗವಿಹೀನಳಾಗಿರುವ ಮಗಳನ್ನು ಯಾವ ರೀತಿಯಿಂದಲೂ ನೋಯಿಸಲು ಆವಳ ಮನಸ್ಸು ಹಿಂದೆಗೆಯುತ್ತಿತ್ತು. ನಳಿನಿ ಹಠಹಿಡಿದು, ಹೊರಳಾಡಿದರೂ ಕುಮುದ ಅದನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ.

ಆದರೆ ಗಂಗೆಯ ಕಣ್ಣೀರು ?

ಅದನ್ನು ಕಂಡರೆ ಅವಳ ಹೃದಯವೇ ಕಿತ್ತುಬಂದಂತಾಗುತ್ತಿತ್ತು.

ಗಂಗಳ ಅಲಂಕಾರ ಮುಗಿದ ಮೇಲೆ ರಾಮು ಅವಳನ್ನು ಹೊತ್ತುಕೊಂಡು ಮನೆಯೊಡತಿಯನ್ನು ಹಿಂಬಾಲಿಸಿದ.

ಸ್ನೇಹಿತೆಯ ಮನೆಯೊಳಗೆ ಮಗಳನ್ನು ಕರೆದುಕೊಂಡು ಹೋಗಲು ಕುಮುದ ಇಷ್ಟಪಡಲಿಲ್ಲ. ಮಗಳನ್ನು ರಾಮುನ ಸಂಗಡವೇ ಬಿಟ್ಟು ಕುಮುದ ಅಹಲ್ಯೆಯ ಮನೆಯೊಳಗೆ ಹೊರಟಾಗ ಗಂಗ ಕೂಗಿಕೊಂಡಳು.

"ಅಮ್ಮಾ....ನಾನೂ ಬರ್ತೀನಿ...."

ಆಗ ಕುಮುದ ವಿಧಿಯಿಲ್ಲದೆ ಮಗಳನ್ನು ಎತ್ತಿಕೊಳ್ಳಲೇ ಬೇಕಾಯಿತು. ನಿಲ್ಲಲು ಶಕ್ತಿಯಿಲ್ಲದ, ನಡಗೆ ಬಾರದ ಮಗಳನ್ನು ಕುಮುದ ತನ್ನ ಸಂಗಡ ಹೊರಗೆಲ್ಲೂ ಕರೆದುಕೊಂಡು ಹೋಗುತ್ತಿರಲಿಲ್ಲ.

ವಯಸ್ಸಿಗೆ ಮಿತಿಮೀರಿದ ಬೆಳವಣಿಗೆ ಗಂಗೆಯದು ! ಅವಳನ್ನು ಎತ್ತಿಕೊಂಡು ನಾಲ್ಕು ಹೆಜ್ಜೆ ಇಡುವುದೂ ಕುಮುದಳ ಪಾಲಿಗೆ ಅಸಾಧ್ಯವಾಯಿತು. ಅಪಮಾನವಾಗುವುದೇನೋ ಎಂಬ ಅಳುಕು ಅವಳಿಗೆ ! ಮಗಳಿಗೆ ನಡಗೆ ಬಾರದಿರುವ ವಿಷಯ ಎಲ್ಲರಲ್ಲೂ ಹರಡಿದ ಮೇಲೆ ಆ ಭಯದಿಂದ ಕುಮುದ ದೂರ ಸರಿದಳು.

"ಎಲ್ಲ ಮಕ್ಕಳಂತೆಯೇ ನಾವು ಗಂಗಳನ್ನು ಸಾಕಬೇಕು ಕುಮುದ. 'ನಾನು ಕೀಳು ಎಲ್ಲರಂತಲ್ಲ,' ಎಂಬ ಕೀಳು ಮನೋಭಾವನೆ ಮಗುವಿನಲ್ಲಿ ಬೆಳೆಯದಂತೆ ನಾವು ಎಚ್ಚರಿಕೆಯಿಂದ ನಡೆದುಕೊಳ್ಳಬೇಕು." ಎಂದು ಮಾಧವ ಆಗಾಗ್ಗೆ ಹೆಂಡತಿಗೆ ಹೇಳುತ್ತಲೇ ಇರುತ್ತಿದ್ದ. ಗಂಡನ ಮಾತಿನಲ್ಲಿದ್ದ ಸತ್ಯತೆಯನ್ನು ಕುಮುದ ಕಂಡುಕೊಂಡು, ಅದಕ್ಕೆ ತಕ್ಕಂತೆ ನಡೆದುಕೊಳ್ಳುತ್ತಿದ್ದಳು.

"ಎಷ್ಟು ತೂಕವಾಗಿದ್ದಾಳೆ ! ಮೊದಲಿನ-ತೆ ಇವಳನ್ನು ಎತ್ತುವುದೇ ನನ್ನಿಂದ ಸಾಧ್ಯವಾಗುತ್ತಿಲ್ಲ." ಎಂದು ಮನಸ್ಸಿನಲ್ಲೇ ಯೋಚಿಸುತ್ತಾ ಕುಮುದ ಅಹಲ್ಯೆಯ ಮನೆ ಹೊಕ್ಕಳು.

ಹತ್ತು ತಿಂಗಳ ತನ್ನ ಮಗು ರೇಖಳನ್ನೆತ್ತಿಕೊಂಡಿದ್ದ ಅಹಲ್ಯೆ ಮುಖದ ಮೇಲೆ ನಸುನಗೆಯ ಹೂವನ್ನು ಅರಳಿಸಿ ಗೆಳತಿಯನ್ನು ಸ್ವಾಗತಿಸಿದಳು.

"ಇಲ್ಲೇ ಕೂತುಕೊಂಡಿರು....ಎಲ್ಲರಿಗೂ ಎಲೆ ಅಡಿಕೆ ಕೊಟ್ಟುಬಿಟ್ಟು ಬಂದು ಎತ್ತುಕೋತೀನಿ...."

ಅಹಲ್ಯೆ ಮಗಳನ್ನು ಚಾಪೆಯ ಮೇಲೆ ಕೂರಿಸಿ ಬಂದವರ ಸತ್ಕಾರದಲ್ಲಿ ಭಾಗಿಯಾದಳು. ರೇಖ ತನ್ನ ಮುಪ್ಪಾದ ದುಂಡು ಕೈಗಳನ್ನು ನೆಲಕ್ಕೆ ಊರಿ, ತನ್ನ ಗಿಡ್ಡ ದೇಹವನ್ನು ನಿಲ್ಲಿಸಿದಳು. ತಾಳಕ್ಕೆ, ವಾದ್ಯಕ್ಕೆ ತಕ್ಕಂತೆ ನಿಧಾನವಾಗಿ ಹೆಜ್ಜೆ ಹಾಕುವ ನರ್ತಕಿಯಂತೆ ರೇಖ ಒಂದೊಂದೇ ಹೆಜ್ಜೆಗಳನ್ನಿಡುತ್ತಾ ತಾಯಿಯ ಬಳಿ ನಡೆದಳು.

ಅದೇ ವಯಸ್ಸಿನಲ್ಲಿ ನಡೆಯುತ್ತಿದ್ದ ಗಂಗಳ ನೆನಪಾಗಿ ಕುಮುದ ನಿಟ್ಟುಸಿರು ಬಿಟ್ಟಳು.

ರೇಖ ಕುಮುದಳ ಭುಜವನ್ನು ಮುಟ್ಟಿ ಅವಳ ಭಾವಸಮಾಧಿಗೆ ಭಂಗ ತಂದಳು.

"ಬಾ ಚಿನ್ನ...." ಕುಮುದಳ ಮೌನಮುದ್ರಿತ ಮುಖ ಅರೆಗಳಿಗೆಯಲ್ಲಿ ನಗುಮಲ್ಲಿಗೆಯಾಗಿ ಅರಳಿತು.

"ಅಮ್ಮಾ, ನಾನೂ ಬಂದುಬಿಟ್ಟೆ...." ನಳಿನಿ ಓಡುತ್ತಾ ಬಂದು ತಾಯಿಯ ಪಕ್ಕದಲ್ಲಿ ಕುಳಿತುಕೊಂಡಳು. ಶಾಲೆಯಿಂದ ಮನೆಗೆ ಬಂದ ಮೇಲೆ ತಾಯಿಯನ್ನು ಹಿಂಬಾಲಿಸಿ ಬಂದಿದ್ದಳು ನಳಿನಿ. ಬರುವ ಗಡಿಬಿಡಿಯಲ್ಲಿ ಅವಳು ಅಲಂಕಾರವನ್ನು ಸಂಪೂರ್ಣವಾಗಿ ಅಲಕ್ಷ್ಯಮಾಡಿದ್ದಳು. ಹಣೆ ತುಂಬ ತುಂಬಿಕೊಂಡಿದ್ದ ಅಂಕೆ ತಪ್ಪಿದ ಮಗಳ ಕೂದಲುಗಳನ್ನೂ, ಮುಖ ತೊಳೆಯದ ಎಣ್ಣೆಯ ಜಿಗುಟು ಸುರಿಯುತ್ತಿದ್ದ ಮುಖವನ್ನೂ ನೋಡಿದ ಕುಮುದಳಿಗೆ ಬೇಸರವಾಯಿತು.

"ಸದ್ಯ ! ಬಂದ್ಯಲ್ಲಾ. ನೀನೆಲ್ಲಿ ಬರೋದಿಲ್ವೋ ಅಂತ ನಾನು ಕೊರಗ್ತಾ ಇದ್ದೆ...."

ಬೇಸರ ಹಾಗೂ ಕೋಪ ಮಿಶ್ರಭಾವದ ಆಳದಿಂದ ಹೊರಬಿದ್ದಿತು ಆ ಮಾತು !

"ರೇಖ....ನೀನು ಡ್ಯಾನ್ಸ್ ಮಾಡಮ್ಮ ಜಾಣೆ. ದೊಡ್ಡಮ್ಮ ನೋಡ್ಬೇಕಂತೆ."

ಅಹಲ್ಯೆ ಮಗುವಿಗೆ ಪ್ರೋತ್ಸಾಹಕೊಟ್ಟಳು. ಮುದ್ದು ಮಗಳ ನರ್ತನ ಪ್ರದರ್ಶನ ಬಂದವರೆದುರಿನಲ್ಲಿ ನಡೆಯಲಿ, ಅದನ್ನು ನೋಡಿ ಮನಸಾರ ಅವರೆಲ್ಲರೂ ಆನಂದಿಸಲಿ ಎನ್ನುವ ಅಭಿಲಾಷೆ ತಾಯಿಯದು !

ರೇಖ ಹೆಚ್ಚು ಹೇಳಿಸಿಕೊಳ್ಳದೆ ನಿಂತ ಜಾಗದಲ್ಲೇ ನರ್ತನಕ್ಕೆ ಆರಂಭಿ

ಸಿದಳು. ಆ ಎಳೆಯ ದೇಹದ ಬಳುಕಾಟ ನೋಡುವವರಿಗೆ ಎರಡು ಕಣ್ಣು ಸಾಲದೆನಿಸುತ್ತಿತ್ತು. ಅವಳ ಕಾಲಿನಲ್ಲಿದ್ದ ಬೆಳ್ಳಿಯ ಗೆಜ್ಜೆಗಳು 'ಘಲ್ ಘಲ್' ಶಬ್ದ ಮಾಡುತ್ತಾ ತಮ್ಮೊಡತಿಯ ನರ್ತನಕ್ಕೆ ಹಿನ್ನೆಲೆ ಸಂಗೀತವನ್ನೊದಗಿಸುತ್ತಿದ್ದವು.

ಮನಬಂದಂತೆ ಕುಣಿಯುತ್ತಾ, ತೋರಿದಂತೆ ಕೈ ತಿರುಗಿಸುತ್ತಾ ನರ್ತಿಸುತ್ತಿದ್ದ ರೇಖ ಎಲ್ಲರ ಮನಸ್ಸನ್ನೂ ತನ್ನ ಕಡೆ ಆಕರ್ಷಿಸಿದಳು.

ನಳಿನಿ ತಾನೂ ನಿಂತು ರೇಖಳನ್ನು ಅನುಕರಣೆಗೆ ಪ್ರಾರಂಭಿಸಿದಳು. ಹೆಂಗಸರೆಲ್ಲರೂ ಉತ್ಸಾಹದಿಂದ ಕೈಕಟ್ಟಿ ತಾಳಹಾಕಲು ಪ್ರಾರಂಭಿಸಿದರು.

ಆದರೆ ಗಂಗ ?

ರೇಖ, ನಳಿನಿಯರಂತೆ ನಿಂತು ನೃತ್ಯಮಾಡುವ ಬಯಕೆ ಗಂಗಳಿಗಿತ್ತು. ಆದರೆ....ನಿಲ್ಲಿಸಲಾಗದ ಅವಳ ಬಲಗಾಲು ಅವಳಾಸೆಗೆ ಭಂಗ ತಂದಿತು. ಆದರೂ ಸುಮ್ಮನೆ ಕುಳಿತುಕೊಳ್ಳುವುದು ಅವಳ ಎಳೆಯ ಹೃದಯಕ್ಕೆ ಸಾಧ್ಯವಾಗಲಿಲ್ಲ. ಗಂಗ ಕುಳಿತ ಕಡೆಯಲ್ಲೇ ನೃತ್ಯಕ್ಕೆ ಪ್ರಾರಂಭಿಸಿದಳು. ಎಡಗಾಲನ್ನು ಎತ್ತಿ ಎತ್ತಿ ಹಾಕುತ್ತಾ, ಎರಡು ಕೈಗಳನ್ನೂ ತಟ್ಟುತ್ತಾ ತಾನೂ ಆ ಸಂಭ್ರಮದಲ್ಲಿ ಭಾಗಿಯಾಗಲು ಪ್ರಯತ್ನಪಟ್ಟಳು.

ಆ ಗುಂಪಿನಲ್ಲಿದ್ದವರೆಲ್ಲಾ ಮೈಮರೆತು ರೇಖಳ ನೃತ್ಯವನ್ನು ನೋಡುತ್ತಾ ಕುಳಿತುಕೊಂಡರು. ನಳಿನಿ ಇದ್ದಕ್ಕಿದ್ದಂತೆ ಎದ್ದು ಹೊರಗೆ ಓಡಿಹೋದಳು.

"ನಳಿನಿ....ಇರು, ನಾನು ಬಂದುಬಿಡ್ತೀನಿ...."

ಕುಮುದಳ ಕಡೆ ನಳಿನಿ ಹಿಂತಿರುಗಿಯೂ ನೋಡದೆ ಮನೆ ಸೇರಿದಳು.

"ಎಲೆ ಅಡಿಕೆ ಸಹ ತೆಗೆದುಕೊಳ್ಳದೆ ಹೊರಟುಹೋದಳಲ್ಲಾ...."

ಅಹಲ್ಯೆ ಓಡಿಹೋದ ನಳಿನಿಯನ್ನು ನೋಡುತ್ತಾ ಹೇಳಿದಳು.

ತಿಂಡಿಯಾಸೆಗೆ ಬಂದು ಅನಿರೀಕ್ಷಿತವಾಗಿ ಒಬ್ಬಳೇ ಮನೆಗೆ ಓಡಿಹೋದ ಮಗಳ ನಡವಳಿಕೆಯಿಂದ ಕುಮುದಳಿಗೆ ಆಶ್ಚರ್ಯವಾಯಿತು.

ಕುಮುದ ಮನೆಗೆ ಬಂದೊಡನೆ ನಳಿನಿಗಾಗಿ ಹುಡುಕಾಡಿದಳು. ಮುಂಬಾಗಿಲಿನಲ್ಲಿ ಮಗಳು ಕಾಣದಿದ್ದಾಗ ಅವಳ ಕುತೂಹಲ ಕೆರಳಿತು.

ಮಂಚದ ಮೇಲೆ ಮಲಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದ ಮಗಳನ್ನು ಕಂಡಾಗ ಕುಮುದ ಧಾವಿಸಿ ಅವಳನ್ನು ಸಮೀಪಿಸಿದಳು.

"ಯಾಕೆ ನಳಿನಿ? ಏನಾಯ್ತು....ಯಾರಾದರೂ ಅವರ ಮನೆಯಲ್ಲಿ ನಿನ್ನನ್ನು ಬೈದರೆ....?"

ತಾಯಿಯ ಪ್ರಶ್ನೆಯ ಮಾಲೆಗೆ ಮಗಳು ಕಣ್ಣೀರಿನ ಕೋಡಿ ಹರಿಸಿದಳು.

"ನಳಿನಿ....ಯಾಕೆ ಅಳ್ತಾ ಇದೀಯ, ಹೇಳಬಾರ್ದೆ ?"

ಕುಮುದ ಅಂಗಲಾಚಿದಳು.

ನಳಿನಿ ಕಣ್ಣೀರಿನಿಂದ ತೊಯ್ದ ಮುಖವನ್ನು ನಿಧಾನವಾಗಿ ತಾಯಿಯ ಕಡೆ ತಿರುಗಿಸಿ ಹೇಳಿದಳು.

"ಗಂಗ ಕುಳಿತುಕೊಂಡೇ ಕುಣಿಯುತ್ತಿದ್ದಳು. ಅದನ್ನು ನೋಡಿ ನನಗೆ ತುಂಬ ಅಳು ಬಂದುಬಿಡ್ತು. ನಾನು ನೋಡಲಾರದೆ ಮನೆಗೆ ಓಡಿ ಬಂದುಬಿಟ್ಟೆ ಅಮ್ಮ. ನನ್ನ ಕಾಲುಗಳನ್ನು ಅವಳಿಗೆ ಕೊಡುವಂತಿದ್ದರೆ...."

ಆ ಮಾತು ಹೇಳುವಾಗ ಹೊಸದಾದ ಕಣ್ಣೀರು ಅವಳ ಕೆನ್ನೆಯ ಮೇಲೆ ನುಗ್ಗಿ ಬಂದಿತು. ಬಿಕ್ಕಳಿಕೆ ಅವಳ ಮಾತು ಮುಗಿಯದಂತೆ ಮಾಡಿತು.

ತಂಗಿಯ ಸ್ಥಿತಿಗಾಗಿ ಅಕ್ಕನ ಮರುಕ!

* * * *

ಅಂದು ಗೌರಿಯ ಹಬ್ಬದ ಸಡಗರದಲ್ಲಿ ಮನೆಯವರೆಲ್ಲಾ ಭಾಗಿಯಾಗಿದ್ದರು. ಗೌರಿ–ಗಣೇಶರ ಪ್ರತಿಮೆಗಳನ್ನು ಇಟ್ಟು ಪೂಜಿಸಲು ಮಾಧವ ತನ್ನ ಪುಸ್ತಕಗಳಿದ್ದ ಪುಟ್ಟ ಮೇಜೊಂದನ್ನು ತೆರವು ಮಾಡಿ ಹಜಾರದಲ್ಲಿ ಇಟ್ಟ. ಆ ಮೇಜನ್ನು ಮಾವಿನ ಸೊಪ್ಪಿನ ತೋರಣಗಳಿಂದ, ಬಾಳೆಯ ಕಂಬಗಳಿಂದ ಅಲಂಕರಿಸಿದ.

"ಅಣ್ಣ....ಎಲ್ಲರೂ ನಮ್ಮ ಮನೆ ಗಣೇಶನ್ನ ನೋಡೋದಕ್ಕೆ ಬರ್‍ತಾರಲ್ವ ?"

ನಳಿನಿ ಅಲ್ಲಿಯೇ ಕುಳಿತು ತಂದೆಯ ಕೆಲಸಗಳನ್ನು ಗಮನಿಸುತ್ತಿದ್ದಳು.

"ಹೂಂ. ನೀನೂ ಗಣೇಶನ್ನ ನೋಡೋದಕ್ಕೆ ಹೋಗೋದಿಲ್ವೇನು ?"

"ಹೋಗದೆ ? ನಾನು ಈ ಸಲ ಐನೂರು ಮನೆಗಳಲ್ಲಿ ಗಣೇಶನ್ನ ನೋಡಿಕೊಂಡು ಬರ್‍ತೀನಿ. ಊಟ ಆದ ಕೂಡಲೆ ಗಣೇಶನ್ನ ನೋಡೋದಕ್ಕೆ ಹೊರಟುಬಿಡೋದೆ...."

"ಅಣ್ಣಾ....ನಾನು ?"

ಗಂಗಳಿಗೆ ಅಕ್ಕನೊಡನೆ ಗಣೇಶನನ್ನು ನೋಡಿಬರುವ ಆಕಾಂಕ್ಷೆ.

ನಾನು, ಸರಸು, ಶಾಂತಿ, ಜಯ ಎಲ್ಲರೂ ಹೋಗ್ತೀವಿ. ನಮ್ಮ ಜೊತೆ ನಿನಗೆ ನಡೆದುಕೊಂಡು ಬರೋದಿಕ್ಕೆ ಆಗೋದಿಲ್ವಲ್ಲಾ ಗಂಗ."

ಗಂಗಳ ಎಳೆಯ ಮುಖ ಮುದುಡಿಕೊಂಡಾಗ ಮಾಧವ ಸಂಕಟದಿಂದ ನರಳಿದ.

"ನಿಜ....ನನಗೆ ಗಣೇಶ ನಡೆಯುವ ಶಕ್ತಿ ಕೊಟ್ಟರೆ...."

ಗಂಗ ತನಗೆ ತಾನೇ ಮಾತನಾಡಿಕೊಂಡಳು.

* * * *

ಮೂರನೆ ಬಾರಿ ಮಾಧವ ಮಗನ ತಂದೆಯಾದಾಗ ಮನೆಯಲ್ಲಿ ಸಂಭ್ರಮದ ತಂಗಾಳಿ ಬೀಸಿತು. ಎರಡನೆಯ ಮಗು ಗಂಗಳಿಂದ ಕುಮುದಳಿಗೆ ಜೀವನವೆಲ್ಲಾ ಬೇಸರವಾಗಿ ಪರಿಣಮಿಸಿತ್ತು. ಆ ಮಗುವಿನ ಕರಾಳ ಭವಿಷ್ಯದ ಬಗ್ಗೆ ಯೋಚಿಸಿ ಸಾಕಷ್ಟು ಅವಳು ಹುಚ್ಚಳಾಗಿದ್ದಳು. ಇನ್ನು ಮಕ್ಕಳೇ ಬೇಡ ಎಂದುಕೊಂಡಿದ್ದರೂ ರಮೇಶ ಆ ಹದಗೆಟ್ಟಿದ್ದ ವಾತಾವರಣದಲ್ಲಿ ಬಂದಿಳಿದು ಆನಂದದ ಚಿಲುಮೆಯನ್ನು ನಿರ್ಮಾಣಮಾಡಿದ.

"ಪುಟ್ಟ ತಮ್ಮ ನಿನಗೆ ಹುಟ್ಟಿದ್ದಾನೆ ಗಂಗ...."

ಗಂಗಳ ಅಜ್ಜಿ ಸಂಭ್ರಮದಿಂದ ಕುಮುದ ಮಲಗಿದ್ದ ರೂಮಿನಿಂದ ಒಳಕ್ಕೂ ಹೊರಕ್ಕೂ ಓಡಾಡುತ್ತಿದ್ದರು. ಅರವತ್ತು ದಾಟಿದ್ದ ಆಕೆಯ ದೇಹಕ್ಕೆ ಅಂದು ಇಪ್ಪತ್ತರ ಪ್ರಾಯ ಬಂದಹಾಗಿತ್ತು.

"ನಾನು ಆ ಪಾಪನ್ನ ಎತ್ತಿಕೋಬಹುದಾ ಅಜ್ಜಿ ?"

ಗಂಗ ವಿಸ್ಮಯದಿಂದ ಕೇಳಿದಳು.

"ಓಹೋ ! ಧಾರಾಳವಾಗಿ."

"ನಾನು ಪಾಪನಿಗೆ ಹಾಲು ಕುಡಿಸಬಹುದಾ ?"

"ಹೂಂ...."

ಗಂಗ ಸಂತೋಷದಿಂದ ಕೈ ಚಪ್ಪಾಳೆ ತಟ್ಟಿದಳು.

ಬೇಸಿಗೆಯ ಬಿಸಿಲು ಬೆಳಗಿನಿಂದ ನೆಲವನ್ನು ಕಾಯಿಸಿದ್ದುದರಿಂದ, ರಾತ್ರಿ ಬೀಸಿ ಬರುತ್ತಿದ್ದ ಗಾಳಿಯೂ ಸಹ ಧಗೆಯನ್ನುಂಟುಮಾಡುತ್ತಿತ್ತು. ವಿಶಾಲವಾದ ಕಾಂಪೌಂಡಿನಲ್ಲಿ ದೊಡ್ಡದಾಗಿ ಬೆಳೆದು, ಅಗಲವಾಗಿ ಹರಡಿ ನಿಂತಿದ್ದ ಬೇವಿನ ಮರದ ಕೆಳಗಿದ್ದ ಕಲ್ಲುಬೆಂಚಿನ ಮೇಲೆ ಮಾಧವ ಕಾಲು ಚಾಚಿ ಮಲಗಿದ್ದ. ಮುಗಿಲಿನಲ್ಲಿ ಮೋಡ ಕಟ್ಟಿ ನಿಂತಿದ್ದರೂ, ಬಿಸಿಲಿಲ್ಲದಿದ್ದರೂ ಧಗೆ ಉಸಿರು ಕಟ್ಟಿಸುತ್ತಿತ್ತು. ಮರದ ಕೆಳಗೆ ಮಲಗಿ, ಬೀಸುವ ಗಾಳಿಗೆ ಎದೆಯೊಡ್ಡಿದ ಮೇಲೆ ಮಾಧವನ ದೇಹಕ್ಕೆ ಸ್ವಲ್ಪ ಹಾಯೆನಿಸಿತು.

ರಮೇಶನನ್ನು ಮಲಗಿಸಿದ ಮೇಲೆ ಕುಮುದಳಿಗೆ ಗಂಡನ ಯೋಗಕ್ಷೇಮವನ್ನು ವಿಚಾರಿಸಲು ಸ್ವಲ್ಪ ಬಿಡುವಾಯಿತು. ನಾಳೆಯ ಪರೀಕ್ಷೆಗೆ ಮಕ್ಕಳಿಬ್ಬರೂ ಓದುತ್ತಿರುವುದನ್ನು ತಿಳಿದ ಮೇಲೆ ಕುಮುದಳ ಮನಸ್ಸಿಗೆ ನೆಮ್ಮದಿಯಾಯಿತು.

"ಯಾರೂ? ಕುಮುದ....?"

ಕುಮುದ ಹಣೆಯ ಮೇಲೆ ಕೈಯಿಟ್ಟು ಮಲಗಿದ್ದ ಗಂಡನ ಭುಜದ ಮೇಲೆ ತನ್ನ ಹಸ್ತವನ್ನಿಟ್ಟಾಗ ಮಾಧವ ಕಣ್ತೆರೆದ.

"ರಮೇಶ ಮಲಗಿಕೊಂಡನೆ?"

"ಹೂಂ...."

"ಅದಕ್ಕೇ ನಿನಗೆ ನನ್ನ ಜ್ಞಾಪಕ ಬಂತೇನೊ ಅಲ್ವೆ? ಹೆಂಗಸರು ತಾಯಿಯರಾದ ಮೇಲೆ ಗಂಡಂದಿರನ್ನು ಸಂಪೂರ್ಣವಾಗಿ ಅಲಕ್ಷ್ಯಮಾಡಿಬಿಡುತ್ತಾರೆ ಎಂದು ಯಾವುದೋ ಪುಸ್ತಕದಲ್ಲಿ ನಾನು ಓದಿದ್ದೆ. ಅದು ಸತ್ಯ ಎಂದು ಈಗ ನನಗೆ ಅನುಭವವಾಗುತ್ತಿದೆ...."

ಮಾಧವ ಹೆಂಡತಿಯನ್ನು ಕೀಟಲೆ ಮಾಡಿದ.

ಗಂಡ ಹೆಂಡಿರಲ್ಲಿದ್ದ ಸರಸ-ಸಂಭಾಷಣೆ, ಮನೆಯಲ್ಲಿ ತುಂಬಿ ನಿಂತಿದ್ದ ಹಾಸ್ಯ ಚಟಾಕಿಗಳು, ಗಂಗ ಹುಟ್ಟಿದಮೇಲೆ ಮಾಯವಾಗಿಹೋಗಿತ್ತು. ಆದರೆ ರಮೇಶ ಅವುಗಳನ್ನೆಲ್ಲಾ ಮತ್ತೆ ತನ್ನ ಆಗಮನದಿಂದ ಬರಮಾಡಿಕೊಂಡಿದ್ದ. ಮಗಳನ್ನು, ಗಂಗೆಯನ್ನು ನೋಡಿದಾಗಲೆಲ್ಲಾ ತಂದೆತಾಯಿಗಳ ಮುಖ ಚಿಂತೆಯಿಂದ ಸುಕ್ಕಾಗುತ್ತಿತ್ತು. ಆದರೆ ರಮೇಶ ಅವರ ಕಂದಿದ ಮುಖಗಳನ್ನು ಬೆಳಗಿಸುತ್ತಿದ್ದ. ಮಗನ ಆಟಪಾಟಗಳನ್ನು ನೋಡಿ ಹಿಗ್ಗುತ್ತಿದ್ದ ದಂಪತಿಗಳು ಮಗಳನ್ನು ದಿನದ ಸ್ವಲ್ಪ ಭಾಗದಲ್ಲಿ ಮರೆತು ಸಂತೋಷದಲ್ಲಿ ಭಾಗಿಯಾಗುತ್ತಿದ್ದರು.

"ಗಂಗ ಏನು ಮಾಡ್ತಾ ಇದಾಳೆ ಕುಮುದ?"

ಸ್ವಲ್ಪ ಪಕ್ಕಕ್ಕೆ ಸರಿದು ಹೆಂಡತಿ ಕುಳಿತುಕೊಳ್ಳಲು ಮಾಧವ ಸ್ಥಳಾವಕಾಶ ಮಾಡಿಕೊಟ್ಟ.

"ಓದುತಾ ಇದಾಳೆ...."

"ಇಷ್ಟು ಚಿಕ್ಕ ವಯಸ್ಸಿನ ಹುಡುಗಿಗೆ ಓದಿನಲ್ಲಿ ಎಷ್ಟೊಂದು ಆಸಕ್ತಿ? ಕುಮುದ....ಒಂದು ಮಾತು ನಿನಗೆ ಹೇಳೋಣಾಂತ...."

ಆಕಾಶದಲ್ಲಿ ತೇಲಿಹೋಗುವ ಮೋಡದಂತೆ ಮಾತನ್ನು ತೇಲಿಸಿದ ಮಾಧವ. ಅದಕ್ಕೆ ಕುಮುದ ಮೌನವಾಗಿ ಕುಳಿತುಕೊಂಡಳು.

"ಗಂಗೆಗೆ ಎಂಟು ವರ್ಷವಾಯಿತು. ಇನ್ನು ಅವಳನ್ನು ಶಾಲೆಗೆ ಎತ್ತಿಕೊಂಡು ಹೋಗುವುದು ಚೆನ್ನಾಗಿರುವುದಿಲ್ಲ...."

"ಅವಳ ಮುಂದಿನ ವಿದ್ಯಾಭ್ಯಾಸ....?"

"ಅದಕ್ಕೆ ಎಂದೂ ನಾನು ಅಡ್ಡಿಮಾಡುವುದಿಲ್ಲ. ಮನೆಯಲ್ಲೇ ಚೆನ್ನಾಗಿ

ಪಾಠ ಹೇಳಿಕೊಡುವ ಉಪಾಧ್ಯಾಯರ ಸಹಾಯದಿಂದ ಗಂಗ ಓದಿಕೊಳ್ಳಲಿ ಖಾಸಗಿಯಾಗಿ ಪರೀಕ್ಷೆಗೆ ಕುಳಿತುಕೊಳ್ಳಲಿ...."

"ಇದಕ್ಕೆ ಗಂಗ ಒಪ್ಪುವಳೆ?"

"ಅವಳನ್ನು ಒಪ್ಪಿಸುವ ಜವಾಬ್ದಾರಿ ನಿನಗೆ ಸೇರಿದ್ದು...."

ಗಂಡ ತನ್ನ ಮೇಲೆ ಹೇರಿದ ಜವಾಬ್ದಾರಿ ಎಷ್ಟು ದೊಡ್ಡದು ಎಂದು ಯೋಚಿಸುತ್ತಾ ಕುಳಿತು ಮೈಮರೆತಳು ಕುಮುದ.

ಗಂಡನ ಮಾತನ್ನು ಕೇಳಿದ ಕುಮುದ ಮುಂದೇನು ಮಾತನಾಡಲೂ ತೋಚದೆ ಸುಮ್ಮನೆ ಕುಳಿತುಕೊಂಡಳು.

ಚಿಂತೆಯ ಬೆಟ್ಟವನ್ನೇ ನೆತ್ತಿಯ ಮೇಲೆ ಹೊತ್ತವಳಂತೆ ಯೋಚಿಸುತ್ತಿದ್ದ ಹೆಂಡತಿಯನ್ನೇ ದಿಟ್ಟಿಸುತ್ತಾ ಮೌನವಾಗಿ ಮಲಗಿದ್ದ ಮಾಧವ.

* * * *

ಅಂದು ಬೇಸಿಗೆಯ ರಜಾದಿನಗಳು ಮುಗಿದು, ಶಾಲೆಗಳೆಲ್ಲಾ ಬಾಗಿಲು ತೆರೆದು ಓಡಿಬರುವ ಹುಡುಗರಿಗೆ, ಹುಡುಗಿಯರಿಗೆ ಸ್ವಾಗತ ನೀಡುವ ದಿನ!

ನಳಿನಿ ತನ್ನ ಎರಡು ಜಡೆಗಳಿಗೂ ಗುಲಾಬಿ ದಂಡೆಯನ್ನು ಮುಡಿದು ಕೊಂಡು, ಬಿಳಿಯ ನೈಲಾನ್ ಲಂಗವನ್ನು ಹಾಕಿಕೊಂಡು ಶಾಲೆಗೆ ಹೊರಡಲು ಸಂಭ್ರಮದಿಂದ ಸಿದ್ಧಳಾದಳು.

"ಅಮ್ಮಾ.... ನಂಗೂ ಸ್ನಾನ ಮಾಡಿಸಮ್ಮ, ಶಾಲೆಗೆ ಹೊತ್ತಾಯ್ತು."

ಅಕ್ಕನ ಸಂಭ್ರಮವನ್ನು ನೋಡಿದ ಗಂಗ ಕುಳಿತ ಕಡೆಯಿಂದಲೇ ಕೂಗಿ ಕೊಂಡಳು. ಮಾಡುತ್ತಿದ್ದ ಕೆಲಸವನ್ನು ನಿಲ್ಲಿಸಿ ಕುಮುದ ನಿಧಾನವಾಗಿ ಮಗಳನ್ನು ಸಮೀಪಿಸಿದಳು.

"ಗಂಗ.... ಇನ್ನುಮೇಲೆ ನೀನು ಶಾಲೆಗೆ ಹೋಗುವುದು ಸಾಧ್ಯವಿಲ್ಲ. ಮನೆಗೇ ಉಪಾಧ್ಯಾಯರು ಬಂದು ಪಾಠ ಹೇಳಿಕೊಡುತ್ತಾರೆ...."

"ಯಾಕೆ....?"

"'ನಿನ್ನನ್ನು ಎತ್ತಿಕೊಂಡು ಹೋಗುವುದು ಸಾಧ್ಯವಿಲ್ಲ' ಎಂದು ಹೇಳಿದ ರಾಮು."

"ಹೌದೆ....?"

ಸುಳ್ಳು ಹೇಳಿ ಸಂದರ್ಭದಿಂದ ಪಾರಾಗಲು ಪ್ರಯತ್ನಿಸಿದಳು ಕುಮುದ.

"ನೀನು ದೊಡ್ಡವಳಾದೆ ಗಂಗ. ನೀನೆ ಯೋಚಿಸಿನೋಡು. ಎತ್ತಿಸಿಕೊಂಡು

ಶಾಲೆಗೆ ಹೋಗುವುದು ನಿನಗೆ ಸರಿಯಾಗಿ ತೋರುತ್ತೇನಮ್ಮಾ?"

ಮಗಳ ದುರ್ಬಲ ಸ್ಥಿತಿಯನ್ನು ಅವಳಿಗೇ ಬಲು ಜಾಣತನದಿಂದ ಅರಿವು ಮಾಡಿಕೊಡಲು ಬಲು ನವಿರಾಗಿ ಹೇಳಿದಳು ಕುಮುದ. ಮಗಳ ಹೃದಯವನ್ನು ನೋಯಿಸಬಾರದೆಂದು ಬಲು ಎಚ್ಚರಿಕೆಯಿಂದ ಅವಳು ಮಾತನಾಡಿದಳು.

"ಮನೆಯಲ್ಲೇ ಕಲಿಯುವುದಕ್ಕೆ ನನಗೆ ಬೇಸರವಾಗುತ್ತಮ್ಮಾ?"

"ಮನಸ್ಸಿಗೆ ಬೇಸರವಾಗದಂತೆ ನೋಡಿಕೊಳ್ಳಬೇಕು ಗಂಗ. ನೀನು ನಡಿಗೆ ಕಲಿತುಕೊಂಡ ಕೂಡಲೆ ಶಾಲೆಗೆ ಹೋಗಬಹುದು...."

"ಅಮ್ಮಾ....ನಾನು ಎಂದಾದರೊಂದು ದಿನ ಮತ್ತೆ ಶಾಲೆಗೆ ಹೋಗುತ್ತೇನೆಯೆ?"

ನೋವು, ದುಃಖ ತುಂಬಿದ ಹೃದಯದ ಅಂತರಾಳದಿಂದ ಹೊರಬಿತ್ತು ಆ ಮಾತು.

"ನಾನು ಶಾಲೆಗೆ ಹೋಗಿ ಬರ್ತೀನಮ್ಮಾ...."

ಹನ್ನೆರಡರಲ್ಲಿ ಕಾಲಿರಿಸಿದ್ದ ನಳಿನಿ ಚೀಲವನ್ನು ಹೆಗಲಿಗೆ ಹಾಕಿಕೊಳ್ಳುತ್ತಲೇ ಓಡಿಹೋದಳು. ಬಾಗಿಲಬಳಿಯಿದ್ದ ತಾಯಿಗೆ, ತಂಗಿಗೆ ಕೈಬೀಸಿ ನಳಿನಿ ಮರೆಯಾದಳು. ರಮೇಶನೂ ಶಿಶುವಿಹಾರಕ್ಕೆ ಆಳಿನೊಡನೆ ಹೊರಟು ಹೋದ. ಅಕ್ಕ-ತಮ್ಮನನ್ನು ಬೀಳ್ಕೊಟ್ಟ ಪೆಚ್ಚುಮುಖ ಹಾಕಿಕೊಂಡು ಸಾವಿರ ಚಿಂತೆಗಳನ್ನು ಹೊತ್ತವಳಂತೆ ಕುಳಿತಿದ್ದ ಗಂಗಳನ್ನು ನೋಡಿ ಕುಮುದಳ ಹೃದಯ ಹಿಂಡಿತು.

"ಗಂಗ....ಅಣ್ಣ ಕೋರ್ಟಿನಿಂದ ಇವತ್ತು ಬೇಗ ಮನೆಗೆ ಬರ್ತೀನಿ ಎಂದು ಹೇಳಿದ್ದಾರೆ. ಅವರು ಬರುವುದರಲ್ಲಿ ಚಪಾತಿ, ಪಲ್ಯ ಸಿದ್ಧವಾಗಬೇಕು. ಸ್ವಲ್ಪ ಆಲೂಗೆಡ್ಡೆ ಹೆಚ್ಚಿಕೊಡುವಂತೆ ಬಾ...."

ದುಃಖದ, ನಿರಾಶೆಯ ಪೊರೆಯ ಮನೆಯಲ್ಲಿ ಮೈಮರೆತಿದ್ದ ಮಗಳನ್ನು ಹೊರಗೆಳೆಯಲು ಕುಮುದ ಪ್ರಯತ್ನಿಸಿದಳು.

ಗಂಗ ತೆವಳುತ್ತಾ ಅಡಿಗೆ ಮನೆಗೆ ಬಂದ ಮೇಲೆ ಕುಮುದ ಅವಳ ಮುಂದೆ ಈಳಿಗೆ ಮಣೆಯನ್ನಿಟ್ಟು ಆಲೂಗೆಡ್ಡೆ ತುಂಬಿದ ಬುಟ್ಟಿಯನ್ನಿಟ್ಟಳು.

"ಹುಷಾರಾಗಿ ಹೆಚ್ಚು ಗಂಗ. ಕೈ ಕುಯ್ಕೋಬೇಡ ಸಧ್ಯ!"

ಹೃದಯದ ನೋವು, ದೇಹದ ತೊಂದರೆ, ಮನಸ್ಸಿನ ಬೇಸರ, ಒಂಟಿತನ ಇವುಗಳಿಂದ ಒಂದು ಕಡೆ ಗಂಗ ಆವರಿಸಲ್ಪಟ್ಟಿದ್ದರೆ, ಪರಿಶುದ್ಧವಾದ ಮನಸ್ಸು,

ಸೂಕ್ಷ್ಮಬುದ್ಧಿ, ಜಾಣತನ, ಮನಮೆಚ್ಚುವಂತಹ ಮಾತುಗಳು ಇವುಗಳಿಂದ ಮತ್ತೊಂದು ಕಡೆ ಅವಳು ಸುತ್ತುವರಿಯಲ್ಪಟ್ಟಿದ್ದಳು.

"ಇಂತಹ ಜಾಣತನವಿರುವ ಹುಡುಗಿಯ ಬುದ್ಧಿಯನ್ನು ಹೇಗೆ ತುಂಬುವುದು? ಇವಳ ಬುದ್ಧಿಗೆ ಹೇಗೆ, ಯಾವ ರೀತಿ ತರಪೇತು ಕೊಡುವುದು?" ಎಂದು ಯೋಚಿಸಿ ಹಣ್ಣಾದಳು ಕುಮುದ.

* * * *

ಪೋಲಿಯೋ ಖಾಯಿಲೆಗೆ ಚಿಕಿತ್ಸೆ ಕೊಡುವ ಒಬ್ಬ ವೈದ್ಯರಲ್ಲಿಗೆ ಮಾಧವ ಮಗಳನ್ನು ಕರೆದುಕೊಂಡು ಹೋದ. ವೈದ್ಯರು ಗಂಗೆಯ ಕಾಲನ್ನು ಪರೀಕ್ಷಿಸುತ್ತಿದ್ದಾಗ ಮಾಧವ ಕುಮುದಳ ಪಕ್ಕಕ್ಕೆ ಸರಿದು ನಿಂತುಕೊಂಡ. ಅವಳ ನಡುಗುವ ಕೈಯನ್ನು ತನ್ನ ವಿಶಾಲವಾದ ಹಸ್ತದೊಳಗಿರಿಸಿಕೊಂಡ. ಇಬ್ಬರ ಕೈಗಳೂ ಮಂಜಿನ ಗಡ್ಡೆಯಂತೆ ಕೊರೆಯುತ್ತಿದ್ದವು.

ಆ ವೈದ್ಯರು ಗಂಗೆಯನ್ನು ಪರೀಕ್ಷೆ ಮಾಡಿ ತಲೆಯಾಡಿಸಿದರು.

"ನಾನೇನೂ ಈ ಮಗುವಿಗೆ ಮಾಡಲಾರೆ...."

"ಆದರೂ....ಒಂದು ಸಲಹೆಯನ್ನಾದರೂ, ನೀವು ಕೊಡುವಿರಾ?

"ಅದಕ್ಕೇನಂತೆ, ನಾನು ಖಂಡಿತವಾಗಿ ನಿಮಗೆ ಒಂದು ಸಲಹೆ ಕೊಡುತ್ತೇನೆ. ಈ ಹುಡುಗಿಯ ಜೀವನಕ್ಕೆ ತೊಂದರೆಯಾಗದಂತೆ ಇವಳ ಹೆಸರಿನಲ್ಲಿ ಹೆಚ್ಚಿನ ಹಣಕ್ಕೆ ಜೀವವಿಮೆ ಮಾಡಿಬಿಡಿ. ನಿಮಗೆ ಈ ಮಗುವನ್ನು ಸಾಕಲು ಕಷ್ಟವಾದರೆ ಯಾವುದಾದರೊಂದು ಅಂಗಹೀನ ಮಕ್ಕಳ ಸಂಸ್ಥೆಗೆ ಸೇರಿಸಿಬಿಟ್ಟು ಇವಳು ನಮಗೆ ಹುಟ್ಟಲಿಲ್ಲವೆಂದೇ ಭಾವಿಸಿ, ಸಂಪೂರ್ಣವಾಗಿ ಮರೆತು ಸುಖವಾಗಿದ್ದುಬಿಡಿ...."

ನಯವಾಗಿ ಹರಿಯುತ್ತಿತ್ತು ಆ ವೈದ್ಯನ ಮಾತಿನ ಪ್ರವಾಹ. ಮಾಧವ ಮುಂದೆ ಕೇಳಲಾರದೆ ಕಿವಿ ಮುಚ್ಚಿಕೊಂಡು ಆ ರೂಮಿನಿಂದ ಹೊರಗೆ ಓಡಿದ. ಇದ್ದ ವಿಷಯವನ್ನು ಇದ್ದಂತೆ ಹೇಳಿ ತಮ್ಮ ಜವಾಬ್ದಾರಿಯನ್ನು ಕಳೆದುಕೊಂಡಿದ್ದರು ಆ ವೈದ್ಯರು. ಒಳಗೊಂದು ಮೇಲೊಂದು ಅವರ ಸ್ವಭಾವಕ್ಕೆ ತೀರ ವಿರುದ್ಧವಾಗಿತ್ತು. ಸತ್ಯ ಸಂಗತಿಯನ್ನು, ತಿಳಿದ ಸಲಹೆಯನ್ನು ಸ್ಪಷ್ಟವಾಗಿ ಹೇಳಿದ್ದರೂ, ಅವರ ಮಾತು ಮಾಧವ, ಕುಮುದರ ಹೃದಯವನ್ನು ಸುಟ್ಟುಹಾಕಿತು.

ಮತ್ತೆ ಎರಡೂವರೆ ವರ್ಷಗಳು ಉರುಳಿದವು—ವ್ಯರ್ಥವಾದ ಹುಡುಕಾಟ, ಆಶೆ–ನಿರಾಶೆಗಳಲ್ಲಿ, ಕುಮುದ ಮಕ್ಕಳಿಬ್ಬರನ್ನೂ ತನ್ನ ತಾಯಿಯ ವಶಕ್ಕೆ

ಒಪ್ಪಿಸಿ, ಗಂಗೆಯನ್ನು ಕರೆದುಕೊಂಡು ಗಂಡನೊಡನೆ ಇಂಡಿಯಾದೇಶವನ್ನೆಲ್ಲಾ ಸುತ್ತಿದಳು.

ಯಾತಕ್ಕಾಗಿ? ಈ ಸುತ್ತಾಟದ ಪರಿಣಾಮ?

'ನಾನೇನೂ ಮಾಡಲಾರೆ,' 'ನನ್ನಿಂದೇನೂ ಸಾಧ್ಯವಿಲ್ಲ' ಎಂಬ ಉತ್ತರವನ್ನು ಕೇಳುವುದಕ್ಕಾಗಿ. ಲೆಖ್ಖವಿಲ್ಲದಷ್ಟು ಹಣ ವ್ಯಯವಾದರೂ ಗಂಗಳ ಸ್ಥಿತಿ ಕಿಂಚಿತ್ತಾದರೂ ಉತ್ತಮಗೊಳ್ಳಲಿಲ್ಲ.

ಮಾಧವ ಮಗಳೊಡನೆ ಬೊಂಬಾಯಿನಲ್ಲಿದ್ದ ವೈದ್ಯರನ್ನು ನೋಡಲು ಅತಿ ಉತ್ಸಾಹದಿಂದ ಹೊರಟ. ಪೋಲಿಯೋ ಮಕ್ಕಳಿಗೆ, ಮಕ್ಕಳ ಖಾಯಿಲೆಗೆ ಸರಿಯಾದ, ಸಮರ್ಪಕವಾದ ಉತ್ತರ ಆ ವೈದ್ಯರ ಬಳಿ ದೊರಕುವುದೆಂದು ಹಲವಾರು ಜನರ ಬಾಯಿಂದ ಕೇಳಿದ್ದ ಮಾಧವ ಮನಸ್ಸಿನಲ್ಲಿ ತುಂಬ ಭರವಸೆಯಿನ್ನಿಟ್ಟುಕೊಂಡು ಅಲ್ಲಿಗೆ ಹೋದ.

"ಪೋಲಿಯೋ ಖಾಯಿಲೆಗೆ ಸಮರ್ಪಕವಾದ ಉತ್ತರ ನಿಮ್ಮಲ್ಲಿ ದೊರೆಯುವುದೆಂದು ಅನೇಕರು ನನಗೆ ಹೇಳಿದರು. ಆದ್ದರಿಂದ ನಾನು ನಿಮ್ಮನ್ನು ಕಾಣಲು ಬಂದೆ...."

"ಅನೇಕರು ನಿಮಗೆ ಆ ರೀತಿ ಹೇಳಿದರೊ?"

ಆ ವೈದ್ಯರು ಗಂಗಳನ್ನು ಪರೀಕ್ಷಿಸಿ ಮಾಧವನೊಡನೆ ಆ ಕೋಣೆಯಿಂದ ಹೊರಗೆ ಬಂದರು.

"ಹೌದು." ಉತ್ಸಾಹದಿಂದ ಮಾಧವ ತಲೆಯಾಡಿಸಿದ.

ಆ ವೈದ್ಯರು ತಗ್ಗಿಸಿದ ತಮ್ಮ ತಲೆಯನ್ನು ಮೇಲೆತ್ತಿದರು. ಮಾಧವನ ಕಣ್ಣುಗಳನ್ನು ತಮ್ಮ ಕಣ್ಣುಗಳಿಂದ ನೇರವಾಗಿ ದಿಟ್ಟಿಸಿದರು.

"ಚೈನಾದೇಶದಲ್ಲಿ ನಿಮ್ಮ ಎದುರಿಗಿರುವ ಸಮಸ್ಯೆಗೆ ಉತ್ತರವಿದೆ."

ಮಾಧವ ಉತ್ಸಾಹದಿಂದ ವೈದ್ಯರನ್ನು ಕೇಳಿದ.

"ಚೈನಾದೇಶದಲ್ಲಿ ಪೋಲಿಯೊ ಮಕ್ಕಳಿಗೆ ಏನು ಮಾಡುತ್ತಾರೆ ಹೇಳಿ. ಎಷ್ಟು ಕಷ್ಟವಾದರೂ ಸರಿ, ಎಷ್ಟು ಹಣ ಖರ್ಚಾದರೂ ಚಿಂತೆಯಿಲ್ಲ, ನಾನೂ ಅದನ್ನು ಮಾಡುತ್ತೇನೆ...."

ಕೈಯೊಳಗಿದ್ದ ಕನ್ನಡಕವನ್ನು ಆ ವೈದ್ಯರು ತಮ್ಮ ಚೂಪಾದ ಥಳಥಳಿಸುವ ಮೂಗಿನ ಮೇಲಿಟ್ಟರು. ಆಮೆಯ ಚಿಪ್ಪಿನ ಕಟ್ಟು ಹಾಕಿದ ಕನ್ನಡಕ ಆತನ ಮೂಗಿನ ಮೇಲೆ ಎಚ್ಚರಿಕೆಯಿಂದ ಸವಾರಿಮಾಡತೊಡಗಿತು.

ವೈದ್ಯರು ನಿಶ್ಚಲ ಭರವಸೆಯಿಂದಲೇ ಮಾತು ಮುಂದುವರಿಸಿದರು.

"ಅಂಗಹೀನ ಮಕ್ಕಳನ್ನು ಚೈನಾದೇಶದ ಜನರು ಪರ್ವತಗಳ ಮೇಲೆ ಬಿಟ್ಟು ಮನೆಗೆ ಬಂದುಬಿಡುತ್ತಾರೆ."

* * * *

ಮಾಧವ ಪತ್ರಿಕೆಯನ್ನು ಹಿಡಿದು ಮೇಜಿನ ಮೇಲಿದ್ದ ಕಾಫಿಯ ಲೋಟವನ್ನು ಕೈಗೆತ್ತಿಕೊಂಡ. ಸರಸರನೆ ಚಲಿಸುತ್ತಿದ್ದ ಅವನ ಕಣ್ಣಾಲಿಗಳು ಇದ್ದಕ್ಕಿದ್ದಂತೆ ಒಂದು ಕಡೆ ತಟಸ್ಥವಾಗಿ ನಿಂತುಕೊಂಡವು....ಮಾಧವ ಕಾಫಿಯ ಲೋಟವನ್ನು ಮೇಜಿನ ಮೇಲಿಟ್ಟು ದಿಗ್ಗನೆ ಮೇಲೆದ್ದ.

"ಕುಮುದ....ಬೇಗ ಬಾ ಇಲ್ಲಿ...."

ಒಲೆಯ ಮೇಲೆ ಒಗ್ಗರಣೆ ಹಾಕಲು ಹೊರಟಿದ್ದ ಕುಮುದ ಕೈಯಲ್ಲಿದ್ದ ಕಬ್ಬಿಣದ ಸೌಟನ್ನು ಹಿಡಿದುಕೊಂಡೇ ಗಂಡನ ಮುಂದೆ ಪ್ರತ್ಯಕ್ಷಳಾದಳು.

"ಇನ್ನೂ ಅಡಿಗೆ ಆಗಿಲ್ವೇನು?"

ಮಡದಿಗಿಂತ ಮುಂದಾಗಿ ಮಾಧವನಿಗೆ ಆ ಕಬ್ಬಿಣದ ಸೌಟು ಕಾಣಿಸಿತು. ಆಯುಧಪಾಣಿಯಾಗಿ ಎದುರಿಗೆ ಬಂದು ನಿಂತ ಹೆಂಡತಿಯನ್ನು ನೋಡಿದ. ಕೂಡಲೆ ಅವಳಿನ್ನೂ ಅಡಿಗೆಮನೆಯ ಬಂಧಿ ಎಂದು ಮಾಧವ ಊಹಿಸಿದ.

"ಒಗ್ಗರಣೆ ಹಾಕಿದರೆ ಅಡಿಗೆ ಆದಹಾಗೆ. ಇವತ್ತು ಭಾನುವಾರ ಅಲ್ಲವೆ? ಅದಕ್ಕೇ ಅಡಿಗೆಯನ್ನು ಸ್ವಲ್ಪ ನಿಧಾನವಾಗಿ ಮಾಡೋಣಾಂತ...."

"ಅಡಿಗೆಗೇನೂ ಈಗ ಅವಸರವಿಲ್ಲ. ನಿನ್ನ ಕೈಲಿ ಸ್ವಲ್ಪ ಮಾತನಾಡಬೇಕಾಗಿತ್ತು. ಬೆಂಬಾಯಿಯಲ್ಲಿ ಪೋಲಿಯೊ ಖಾಯಿಲೆಯಿಂದ ನರಳುತ್ತಿರುವ ಮಕ್ಕಳಿಗೆ ಚಿಕಿತ್ಸೆ ಕೊಡುವುದಕ್ಕಾಗಿಯೇ ಒಂದು ಆಸ್ಪತ್ರೆಯನ್ನು ತೆಗೆದಿದ್ದಾರಂತೆ. ಇವತ್ತಿನ ಪತ್ರಿಕೆಯಲ್ಲಿ ನಾನು ಓದಿ ನೋಡಿದೆ. ನಾಳೆಯೇ ಗಂಗಳನ್ನು ಕರೆದುಕೊಂಡು ಹೋಗಿ ಬರೋಣ...."

ಮಾಧವ ಹುಮ್ಮಸ್ಸಿನಿಂದಲೇ ಮಾತನಾಡಿದ.

ಆದರೆ ಅವನ ಮಾತು ಕುಮುದಳಿಗೆ ಉತ್ಸಾಹ ತಂದುಕೊಡಲಿಲ್ಲ.

"ಹಣ ನೀರಿನಂತೆ ಚೆಲ್ಲುವುದರಿಂದ, ಊರೂರು ಸುತ್ತುವುದರಿಂದ ಇದುವರೆವಿಗೆ ಕೊಂಚವೂ ಗಂಗಳ ಸ್ಥಿತಿ ಸುಧಾರಿಸಿಲ್ಲ."

ನಿರಾಶೆಗಳ ಪೆಟ್ಟು ಮೇಲಿಂದ ಮೇಲೆ ಬಿದ್ದು ಕುಮುದ ತೀರ ಅಧೀರಳಾಗಿದ್ದಳು. ಮಗಳ ಉಜ್ವಲ ಭವಿಷ್ಯದಲ್ಲಿದ್ದ ನಂಬಿಕೆಯನ್ನು ಅವಳು ಸಂಪೂರ್ಣವಾಗಿ ಕಳೆದುಕೊಂಡಿದ್ದಳು.

"ಇಷ್ಟು ಬೇಗ ನೀನು ನಿರಾಶೆ ಹೊಂದಿದರೆ ಹೇಗೆ ಕುಮುದ? ಬೊಂಬಾಯಿಯಲ್ಲಿ ನಿನ್ನ ತಪ್ಮನ ಮನೆಯಿದೆ...."

* * * *

ಪ್ರಯಾಣ ಮಾಡುವುದೆಂದರೆ ಗಂಗೆಗೆ ಯಾರಿಗೂ ಇಲ್ಲದ ಉತ್ಸಾಹ! ವಯಸ್ಸಿಗೆ ಮೀರಿ ಬೆಳೆದಿದ್ದ ಮಗಳನ್ನು ಎತ್ತಿಕೊಂಡು ರೈಲುಗಾಡಿಯನ್ನು ಹತ್ತಿದ ಮಾಧವ. ಮಗಳನ್ನು ಮಗುವಿನಂತೆ ಎತ್ತಿಕೊಂಡಿದ್ದರೂ, ಹೊತ್ತ ಭಾರದ ಹೊರೆಯಿಂದ ಅವನ ದೇಹಕ್ಕೆ ಬಹಳ ಶ್ರಮವಾಯಿತು. ಆದರೆ ಅತ್ತ ಕಡೆ ಅವನ ಲಕ್ಷ್ಯವಿರಲಿಲ್ಲ. ಜನರ ನೂಕು ನುಗ್ಗಲಿನಲ್ಲಿ ನಿಂತು ಪ್ರಯಾಣ ಮಾಡಬೇಕಾಯಿತು. ಮಾಧವ ಮಗಳಿಗೆ ಜಾಗ ಮಾಡಿಕೊಡಲು ಪ್ರಯತ್ನಿಸಿದ.

"ಸ್ವಲ್ಪ ಜರುಗಿಕೊಳ್ಳಿ, ಈ ಮಗೂನ ಕೂರಿಸ್ತೀನಿ...."

ಮಾಧವ ಆಯಾಸದಿಂದ ಏದುತ್ತಾ ಮಾತನಾಡಿದ.

"ಹೋಗ್ರಿ ಬೇರೆ ಗಾಡೀಗೆ. ನಾಲ್ಕುಜನ ಕೂತ್ಕೊಳ್ಳೋ ಜಾಗದಲ್ಲಿ ಏಳು ಜನ ಕೂತುಕೊಂಡಿದೀವಿ. ಇನ್ನು ಎಲ್ಲಿಗೆ ಜರುಗೋದು ?"

ಮೀಸೆಯಿದ್ದ ಯುವಕನೊಬ್ಬನಿಂದ ಬಿಲ್ಲಿನಿಂದ ಹೊರಟ ಬಾಣದಂತೆ ಬಿರುಸಾಗಿ ಹಾರಿಬಂದು ಮಾಧವನಿಗೆ ಹೊಡೆಯಿತು. ಮಾಧವ ಮಗಳನ್ನು ಎತ್ತಿಕೊಂಡೇ ನಿಲ್ಲಬೇಕಾಯಿತು. ಗಂಡನ ಬೆವರೊಡೆಯುತ್ತಿದ್ದ ಮುಖವನ್ನು ಕಂಡ ಕುಮುದಳಿಗೆ ಆತನ ಕಷ್ಟದ ಅರಿವಾಯಿತು.

"ನಾವಾದರೆ ನಿಂತುಕೊಳ್ಳುತ್ತೇವೆ. ಆದರೆ ಈ ಮಗುವಿಗೆ ನಿಂತುಕೊಳ್ಳುವ ಶಕ್ತಿಯಿಲ್ಲ. ಆದ್ದರಿಂದ ದಯವಿಟ್ಟು ಯಾರಾದರೂ ಸ್ವಲ್ಪ ಜಾಗ ಮಾಡಿ ಕೊಟ್ರೆ...."

ಕುಮುದ ಕುಳಿತಿರುವವರನ್ನೆಲ್ಲಾ ಒಂದು ಬಾರಿ ನೋಡಿ, ಎದೆ ಕರಗುವಂತೆ ಬೇಡಿಕೊಂಡಳು. ಆದರೂ ಆ ಬೆಂಚಿನ ಕೊನೆಯಲ್ಲಿ ಕುಳಿತಿದ್ದ ಯುವಕ ಮಿಸುಗಾಡಲಿಲ್ಲ. ಅವನ ಬಿಗಿದ ಮೋರೆ ಸಡಿಲಗೊಳ್ಳಲಿಲ್ಲ. ಕುಮುದಳ ಮಾತಿಗೆ ಆತ ಉದಾಸೀನ ಭಾವದಿಂದ ಬೇರೆ ಕಡೆ ಮುಖ ತಿರುಗಿಸಿ ಕುಳಿತುಕೊಂಡ.

"ನಿಮ್ಮ ಮಗೂನ ಇಲ್ಲಿ ಕೂರಿಸಿ ತಾಯಿ...."

ಹಲ್ಲಿಲ್ಲದ ಬೊಚ್ಚು ಬಾಯಿಂದ ತೊದಲು ಮಾತು ಆ ಗಾಡಿಯ ಮೂಲೆಯಿಂದ ಕೇಳಿಸಿದಾಗ ಎಲ್ಲರೂ ಅತ್ತ ನೋಡಿದರು.

ದೇಹ ಹಣ್ಣಾಗಿದ್ದ ಮುದುಕರೊಬ್ಬರು ಎದ್ದು ನಿಂತು ತಮ್ಮ ಜಾಗವನ್ನು ಗಂಗೆಗೆ ಉದಾರ ಮನಸ್ಸಿನಿಂದ ನೀಡಿದರು. ಆತನ ಬೆನ್ನು ಬಿಲ್ಲಿನಂತೆ ಬಾಗಿತ್ತು.

ಆತನ ತಲೆಯ ಮೇಲೆ ಒಂದು ಕೂದಲಿಲ್ಲದಿದ್ದರೂ, ಮುಖವನ್ನು ಮುಚ್ಚುವಂತೆ ಬೆಳೆದಿತ್ತು ಆ ಬಿಳಿಯ ಗಡ್ಡ. ಆ ಗಡ್ಡದ ಬಿಳಿಯ ಚೌಕಟ್ಟಿನೊಳಗಿದ್ದ ಆತನ ನೀಳವಾದ ಮುಖವನ್ನು ನೋಡಿದ ಕೂಡಲೆ ಮಾಧವನಿಗೆ ಕನಿಕರವುಂಟಾಯಿತು. ಆ ಹಣ್ಣು ಮುದುಕರ ಜಾಗವನ್ನು ಕಿತ್ತುಕೊಳ್ಳಲೆ? ಛಿ! ಅನ್ಯಾಯ! ಎನಿಸಿತು.

ಆದರೆ ಯಾರಿಗಾಗಿ? ತನಗಾಗಿ ಅಲ್ಲ....ನಿಲ್ಲಲಾರದ ಗಂಗೆಗಾಗಿ ಅಲ್ಲವೆ?

"ನಿಮಗೆ ತುಂಬಾ ತೊಂದರೆಯಾಯಿತು...."

ಮಾಧವ ತೋಳಿನ ಮೇಲಿದ್ದ ಭಾರವನ್ನು ನೀಗಿಕೊಂಡ. ಆತ ಕುಳಿತಿದ್ದ ಜಾಗದಲ್ಲಿ ಗಂಗೆಯನ್ನು ಕೂರಿಸಿದ ಮೇಲೆ ಉಸಿರಾಡುವಂತಾಗಿ ಅವನ ಆಯಾಸ ಕೊಂಚ ಕಡಿಮೆಯಾಯಿತು. ಆ ಮುದುಕರು ಮಾಧವನ ಪಕ್ಕದಲ್ಲೇ ನಿಂತು ಮಾತಿಗೆ ಪ್ರಾರಂಭಿಸಿದರು.

"ಈ ಮಗೂ ಕಾಲೇನಾಗಿದೆ?"

"ಚಿಕ್ಕ ವಯಸ್ಸಿನಲ್ಲೇ ಪೋಲಿಯೋ ಖಾಯಿಲೆಯಾಗಿ ಬಲಗಾಲು ಶಕ್ತಿಯನ್ನು ಕಳೆದುಕೊಂಡಿದೆ...."

"ಪಾಪ! ನನ್ನ ಅಕ್ಕನ ಮಗ ಒಬ್ಬನಿಗೂ ಇದೇ ರೀತಿಯಾಗಿತ್ತು. ಈಗ ನಡೆಯುತ್ತಾನೆ. ಆದರೂ ಸ್ವಲ್ಪ ಕುಂಟುತ್ತಾನೆ...."

"ಹೌದೇನು? ಎಲ್ಲಿ....ಏನು....ಚಿಕಿತ್ಸೆ ಮಾಡಿಸಿದರು....?"

ಮಾಧವನ ಬಳಲಿ ಬೆಂಡಾಗಿದ್ದ ಮುಖದಲ್ಲೂ ಉತ್ಸಾಹ ಬೆಳಗಿತು.

"ಅವನಿಗೂ ನೂರೆಂಟು ಚಿಕಿತ್ಸೆಯಾಯಿತು. ಲೆಖ್ಖವಿಲ್ಲದಷ್ಟು ವೈದ್ಯರಿಗೆ ಹುಡುಗನನ್ನು ತೋರಿಸಿಯಾಯಿತು. ಬೊಂಬಾಯಿಯಲ್ಲಿ ಪೋಲಿಯೋ ಖಾಯಿಲೆಯಿಂದ ನರಳುವ ಮಕ್ಕಳಿಗೆ...."

ಮುದುಕರ ಮಾತನ್ನು ಮಾಧವ ಮಧ್ಯದಲ್ಲಿಯೇ ಕತ್ತರಿಸಿಹಾಕಿದ.

"ನಾವು ಈಗ ಹೋಗುತ್ತಿರುವುದೂ ಅಲ್ಲಿಗೇ...."

"ಅವನೂ ತೆವಳುತ್ತಾ ಇದ್ದ. ಈಗ ಹದಿನಾರನೆಯ ವಯಸ್ಸಿಗೆ ಕುಂಟುವ ಮಟ್ಟಿಗಾದ ಅನ್ನಿ...."

ಮುದುಕರು ಮಾತು ನಿಲ್ಲಿಸಿ ಬೆನ್ನಿನ ಕಡೆಗಿದ್ದ ಕಿಟಕಿಯ ಕಡೆ ತಿರುಗಿ ರೈಲು ನಿಂತಿರುವ ನಿಲ್ದಾಣ ಯಾವುದೆಂದು ನೋಡಿದರು.

"ಅಣ್ಣ....ಕಿತ್ತಳೆ ಹಣ್ಣು...."

ರಸತುಂಬಿ ನಿಂತಿದ್ದ ಕಿತ್ತಳೆಯ ಹಣ್ಣುಗಳನ್ನು ಬುಟ್ಟಿಯಲ್ಲಿ ಹೊತ್ತು ಹುಡುಗನೊಬ್ಬ ಕೂಗುತ್ತಾ ಬಂದಾಗ ಗಂಗಳಿಗೆ ಹಣ್ಣು ತಿನ್ನುವ ಆಸೆಯಾಯಿತು.

ಕೂಡಲೇ ಮಾಧವ ನಾಲ್ಕು ಹಣ್ಣುಗಳನ್ನು ಅವಳಿಗೆ ತೆಗೆಸಿಕೊಟ್ಟ. ಮಗಳ ಆಸೆಯೇನೆಂದು ತಿಳಿದ ಕೂಡಲೇ ಅದನ್ನು ಮಾಧವ ನಡೆಸಿಕೊಡುತ್ತಿದ್ದ. ನಿರಾಶೆಯಿಂದ ಮುಖ ಹಿಂಡಿ, ಮಗಳು ಪೆಚ್ಚುಮುಖ ಹಾಕಿಕೊಳ್ಳುವುದನ್ನು ನೋಡಿ ಸಹಿಸುವುದು ಅವನಿಂದ ಸಾಧ್ಯವಾಗುತ್ತಿರಲಿಲ್ಲ.

"ಎರಡು ರೂಪಾಯಿ ನೋಟಿಗೆ ಚಿಲ್ಲರೆ ಇದೆಯೇನಯ್ಯಾ ?"

"ಇದೆ ಸ್ವಾಮಿ...."

"ಅಣ್ಣ....ನಂಗೆ ಆ ಒಂದು ರೂಪಾಯಿ ನಾಣ್ಯ ಕೊಡಣ್ಣ...."

ಹಣ್ಣಿನವನು ಮಾಧವನಿಗೆ ಕೊಟ್ಟ ನಾಣ್ಯವನ್ನು ಗಂಗ ಬೇಡಿದಳು.

"ಹುಷಾರಾಗಿ ಇಟ್ಟುಕೊಂಡಿರು. ಎಲ್ಲೂ ಕಳೀಬೇಡ."

ಮಾಧವ ಮಗಳನ್ನು ಮುಂದಾಗಿ ಎಚ್ಚರಿಸಿ, ಜೇಬಿನೊಳಗಿಡುತ್ತಿದ್ದ ನಾಣ್ಯವನ್ನು ಮಗಳ ಕೈಲಿರಿಸಿದ.

ಗಂಗ ಕಿಟಕಿಯಿಂದಾಚೆ ತಲೆ ಹಾಕಿ ಓಡುತ್ತಿದ್ದ ಗಿಡಮರ, ಮನೆಗಳನ್ನು ನೋಡುವುದರಲ್ಲಿ ಮೈಮರೆತಳು. ಕಿಟಕಿಯಿಂದ ನುಗ್ಗಿ ಬರುತ್ತಿದ್ದ ಗಾಳಿಗೆ ಸಿಕ್ಕಿದ ಅವಳ ತಲೆ ಕೂದಲುಗಳು ಸ್ವೇಚ್ಛೆಯಾಗಿ ಹಾರಾಡಿದವು.

ಗುಂತಕಲ್ಲಿನ ಮಾರ್ಗ ಅತ್ಯಂತ ಪ್ರಯಾಸಕರವಾಗಿತ್ತು. ಮಾಧವ ಹೆಚ್ಚು ಕಡಿಮೆ ನಿಂತುಕೊಂಡೇ ಪ್ರಯಾಣ ಮಾಡಿದ. ಹೆಂಡತಿ ಮಗಳಿಗೆ ಸ್ಥಳ ಮಾಡಿಕೊಡಲು ಅವನು ಅನೇಕರೊಡನೆ ಮಾತು ಬೆಳೆಸಬೇಕಾಯಿತು. ಬೊಂಬಾಯಿ ತಲುಪಿದಾಗ ಉಸಿರಾಡುವಷ್ಟು ಚೈತನ್ಯ ಕೂಡ ಅವನಲ್ಲಿ ಉಳಿದಿರಲಿಲ್ಲ.

ಕೂಲಿಯವನ ಸಹಾಯದಿಂದ ಸಾಮಾನುಗಳನ್ನು ಹೊರಿಸಿಕೊಂಡು ಮಾಧವ ಹೆಂಡತಿ ಮಗಳೊಂದಿಗೆ ನಿಲ್ದಾಣದಿಂದ ಹೊರಗೆ ಬರಲು ಸಿದ್ಧನಾದ.

ಪುಟ್ಟ ಹಾಸಿಗೆ, ಕೈಯ್ಯಲ್ಲಿ ಹಿಡಿಯಬಹುದಾದ ಪೆಟ್ಟಿಗೆ ಇವುಗಳನ್ನು ಹೊರುವ ಶಕ್ತಿ ಮಾಧವನಿಗಿದ್ದರೂ, ಅಂದಿನ ಸ್ಥಿತಿಯಲ್ಲಿ ಅವನಿಗೆ ತನ್ನ ದೇಹವನ್ನು ಹೊರುವ ಕೆಲಸವೇ ಅಸಾಧ್ಯವಾಗಿತ್ತು. ಎರಡು ದಿನಗಳ ಪ್ರಯಾಣದಲ್ಲಿ ಮಾಧವ ಒಂದು ಗಳಿಗೆ ಕಾಲು ಚಾಚಿ ಕುಳಿತು ನೆಮ್ಮದಿಯಿಂದ ಉಸಿರಾಡಿರಲಿಲ್ಲ. ಅರೆಗಳಿಗೆ ಕಣ್ಣುಗಳನ್ನು ಮುಚ್ಚಿ ನಿದ್ರಿಸಿರಲಿಲ್ಲ.

"ಏ ಕೂಲಿ, ಈ ಮಗೂನ ಎತ್ತಿಕೊಂಡು ಬಂದು ಟ್ಯಾಕ್ಸೀಲಿ ಕೂರಿಸೋದಕ್ಕೆ ಏನು ಕೊಡಬೇಕು ?"

ಮಾಧವ ಮಗಳನ್ನು ಎತ್ತಲಾರದೆ ಅವಳನ್ನೂ ಕೂಲಿಯವನಿಂದ ಹೊರಿಸಲು ಯೋಚಿಸಿದ.

"ಏನು ! ಈ ಮಗೂನ ಎತ್ತಿಕೋ ಬೇಕೆ ?"

ಆ ಕೂಲಿಯವನಿಗೆ ಎಲ್ಲಿಲ್ಲದ ಆಶ್ಚರ್ಯ ? ಎಂಟು ಹತ್ತು ವರ್ಷವಿರಬಹುದಾದ ಹುಡುಗಿಯನ್ನು ಎತ್ತುವುದೇಕೆ ಎಂಬ ಸೋಜಿಗ ಅವನದು.

"ನನಗೆ ನಡೆಯುವುದಕ್ಕೆ ಆಗೋದಿಲ್ಲ....ಅದಕ್ಕೇ...."

ಗಂಗ ತಾನೇ ಉತ್ತರಕೊಟ್ಟು ಕೆರಳಿದ್ದ ಕೂಲಿಯವನ ಕುತೂಹಲವನ್ನು ಅಡಗಿಸಿದಳು. ತಂದೆ ಅವನಿಗೆ ಕೊಡಬಹುದಾದ ಉತ್ತರವನ್ನು ಊಹಿಸಿ ಗಂಗೆಯೇ ಮಾತನಾಡಿದ್ದಳು. ಕೂಲಿಯವನು ಗಂಗಳನ್ನು ಎತ್ತಿಕೊಂಡ.

"ಗಂಗ....ನಿಂಗೆ ಒಂದು ರೂಪಾಯಿ ಕೊಟ್ಟಿದ್ನಲ್ಲಾ ಕೊಡ್ತೀಯಾಮ್ಮಾ, ಕೂಲಿಯವನಿಗೆ ಕೊಡಬೇಕು...."

ಮಾಧವ ಜೇಬಿನಲ್ಲಿ ಚಿಲ್ಲರೆ ಸಿಕ್ಕದಿದ್ದುದರಿಂದ ಮಗಳನ್ನು ಕೇಳಿದ.

"ನನ್ನ ಹತ್ತಿರ ರೂಪಾಯಿ ಇಲ್ಲ ಕಣಣ್ಣ. ಅದನ್ನು ನಾನು ಭಿಕ್ಷುಕನೊಬ್ಬನಿಗೆ ಕೊಟ್ಟುಬಿಟ್ಟೆ...."

ಬರಿಗೈಯನ್ನು ಅಲ್ಲಾಡಿಸಿದಳು ಗಂಗ.

"ಏನು ! ಒಂದು ರೂಪಾಯಿಯ ನಾಣ್ಯವನ್ನು ಭಿಕ್ಷುಕನಿಗೆ ಕೊಟ್ಟುಬಿಟ್ಯಾ ?"

ಕುಮುದಳ ಪ್ರಶ್ನೆಯಲ್ಲಿ ಕೋಪ, ಆಶ್ಚರ್ಯ ಭಾವನೆಗಳು ಮಿಶ್ರಿತವಾಗಿದ್ದವು.

"ಪಾಪ ! ಆ ಭಿಕ್ಷುಕನಿಗೆ ಒಂದು ಕಾಲೇ ಇರಲಿಲ್ಲ ಕಣಮ್ಮ. ಕೋಲೂರಿಕೊಂಡು ಬಂದು, ಕುಂಟುತ್ತಾ ನನ್ನ ಮುಂದೆ ನಿಂತು ಕೈ ಚಾಚಿದ. ನಾನು ರೂಪಾಯಿ ಕೊಟ್ಟುಬಿಟ್ಟೆ...."

ಗಂಗಳ ಧ್ವನಿಯಲ್ಲಿ ಅಪಾರ ಮರುಕವಿತ್ತು. ಮಗಳ ಮಾತು ಕೇಳಿ ಮಾಧವ ಮೂಕನಂತಾದ, ಕುಮುದಳ ಕೋಪ ಸೂರ್ಯನ ಕಾವಿಗೆ ಕರಗುವ ಹಿಮಗಡ್ಡೆಯಂತೆ ಕರಗಿ ಮಾಯವಾಯಿತು.

ಆಸ್ಪತ್ರೆಯ ದೊಡ್ಡದಾದ ಕಟ್ಟಡ ಮಾಧವನಿಗೆ ಬಹಳ ಆತ್ಮೀಯವಾಗಿ ಕಂಡಿತು. ಆ ಕಟ್ಟಡವನ್ನು ನೋಡಿದ ಕೂಡಲೆ ಭರವಸೆಯ ಮೊಳಕೆ ಅವನ ಹೃದಯದಲ್ಲಿ ಕಾಣಿಸಿಕೊಂಡಿತು.

"ಅಮ್ಮಾ....ಈ ಆಸ್ಪತ್ರೆಯಲ್ಲಿ ಡಾಕ್ಟರು ನನ್ನ ಕಾಲು ಸರಿ ಮಾಡ್ತಾರಾ?"

ಗಂಗ ಮುಗ್ಧಳಾಗಿ ಕಣ್ಣರಳಿಸಿ ತಾಯಿಯನ್ನು ಕೇಳಿದಳು.

"ಹೂಂ...." ಕುಮುದ ತಡವರಿಸಿದಳು.

ಮಗಳು ತನ್ನನ್ನು ಕೇಳಿದ ಪ್ರಶ್ನೆಯನ್ನೇ ಅವಳೂ ಡಾಕ್ಟರನ್ನು ಕೇಳುವುದಕ್ಕಾಗಿಯೇ ಆಸ್ಪತ್ರೆಯ ಬಾಗಿಲಿಗೆ ಬಂದಿದ್ದಳು. ಆದರೆ ಮಗಳಿಗೆ ನಿರಾಶೆಯನ್ನುಂಟುಮಾಡಬಾರದೆಂದು "ಹೂಂ" ಗುಟ್ಟಿದಳು.

"ಡಾಕ್ಟರಿಗೆ ನಿನ್ನ ಕಾಲನ್ನು ತೋರಿಸಿ, ಅವರು ಏನು ಹೇಳ್ತಾರೋ ಕೇಳೋಣ." ಮಾಧವ ಮಗಳಿಗೆ ಸ್ಪಷ್ಟವಾಗಿ ಸಂದರ್ಭವನ್ನು ತಿಳಿಸಿದ.

"ನಾನೂ ನಳಿನೀ ಹಾಗೆ ಜೂಟಾಟ ಆಡಬಹುದಾ?"

"ಹೂಂ...." ಕುಮುದ ತಲೆಯಾಡಿಸಿದಳು.

ಬೆದಕಿ ಕೇಳುವ ಮಗಳ ಪ್ರಶ್ನೆಗೆ ಉತ್ತರ ಹೇಳಿ ಅವಳನ್ನು ತೃಪ್ತಿಪಡಿಸುವುದು ಕುಮುದಳಿಂದ ಸಾಧ್ಯವಾಗಲಿಲ್ಲ.

ಕರಿಯ ಗಡ್ಡದ ಚೌಕಟ್ಟಿನೊಳಗಿದ್ದ ಆ ವೈದ್ಯರ ವಿಷಣ್ಣ ಮುಖವನ್ನು ನೋಡಿ ಗಂಗಳಿಗೆ ಹೆದರಿಕೆಯಾಯಿತು. ಅವಳ ಹೃದಯದಲ್ಲಿ ನೋವು, ಭೀತಿಯನ್ನು ಹುಟ್ಟಿಸುತ್ತಿದ್ದ ಆ ವೈದ್ಯರ ಕಣ್ಣುಗಳ ತೀಕ್ಷ್ಣ ಪ್ರಕಾಶವನ್ನು ಸಹಿಸುವುದು ಅವಳಿಂದಾಗಲಿಲ್ಲ. ಗಂಗ ನಿಧಾನವಾಗಿ ತಾಯಿಯ ಬಳಿ ಸರಿದುಕೊಂಡಳು.

"ಬಾ ಮಗು....ನಿನ್ನ ಕಾಲು ನೋಡ್ತೀನಿ...."

ಧ್ವನಿ ಬೆಣ್ಣೆಯಂತೆ ಬಹಳ ಮೃದುವಾಗಿತ್ತು. ಆ ಮೃದುತ್ವಕ್ಕೆ ಮಣಿದು ಗಂಗ ತನ್ನ ಕಾಲುಗಳನ್ನು ನೋಡಲು ವೈದ್ಯರಿಗೆ ಅವಕಾಶ ಮಾಡಿಕೊಟ್ಟಳು.

"ನಾನು ಶಕ್ತಿಮೀರಿ ಪ್ರಯತ್ನಿಸುತ್ತೇನೆ. ಈ ಮಗುವನ್ನು ಆಸ್ಪತ್ರೆಯಲ್ಲೇ ಕೊನೆಯ ಪಕ್ಷ ಮೂರು ತಿಂಗಳು ಬಿಡಬೇಕು."

ಗಂಗಳ ಕಾಲನ್ನು ಪರೀಕ್ಷಿಸಿದ ಮೇಲೆ ವೈದ್ಯರು ಮೂಗಿನ ಮೇಲಿದ್ದ ಕನ್ನಡಕವನ್ನು ಕೈಗೆ ತೆಗೆದುಕೊಳ್ಳುತ್ತಾ ಹೇಳಿದರು. ಮಾಧವ ಕುರ್ಚಿಯ ಮೇಲೆ ಕುಳಿತಿದ್ದ ಮಗಳನ್ನೇ ನೋಡುತ್ತಾ ಹೇಳಿದ.

"ನನ್ನ ಹೆಂಡತಿಯನ್ನು ಇಲ್ಲೇ ಬಿಟ್ಟಿರುತ್ತೇನೆ. ಆದರೆ ನಾನು ಅಲ್ಲಿಯವರೆಗೂ ಇರಲು ಸಾಧ್ಯವಿಲ್ಲ."

ಗಂಗಳನ್ನು ಕರೆದುಕೊಂಡು ಊರೂರು ಅಲೆಯಲು ಪ್ರಾರಂಭಿಸಿದ ಮೇಲೆ ಮಾಧವನು ತನ್ನ ವೃತ್ತಿಯನ್ನು ಅಲಕ್ಷ್ಯಮಾಡಲೇಬೇಕಾಯಿತು. ಅದರ ಪರಿಣಾಮವಾಗಿ ಅವನ ಸಂಪಾದನೆಯೂ ಕ್ಷೀಣಿಸಿತು.

"ಮೂರು ತಿಂಗಳೆ?"

ಕುಮುದ ವೈದ್ಯರ ಮಾತನ್ನು ನಂಬದವಳಂತೆ ಕಣ್ಣರಳಿಸಿ ಕೇಳಿದಳು.

"ಇನ್ನೂ ಹೆಚ್ಚಿನ ದಿವಸಗಳು ಇರಬೇಕಾಗಬಹುದು. ಪೋಲಿಯೊ ಖಾಯಿಲೆಯಿಂದ ನರಳುವವರಿಗೆ ಸಂಪೂರ್ಣ ಗುಣವಿಲ್ಲ. ನಾಲ್ಕು ಜನರಂತೆ ನಡೆಯುವುದು ಎಂದಿಗೂ ಅವರಿಂದ ಸಾಧ್ಯವಾಗಲಾರದು. ಹಲವಾರು ಚಿಕಿತ್ಸೆಗಳನ್ನು ಕೊಟ್ಟು, ಅವುಗಳಿಂದ ಯಾವ ಪ್ರಯೋಜನವೂ ಆಗದಿದ್ದರೆ, ಒಂದು ಆಪರೇಷನ್ ಮಾಡ್ತೀನಿ. ಇವುಗಳಿಗೆಲ್ಲಾ ಬಹಳ ದಿವಸಗಳು ಹಿಡಿಯುತ್ತದೆ."

ಆ ವೈದ್ಯರು ಸಹನೆಯಿಂದ ಮಾಧವನಿಗೆ ವಿವರಿಸಿದರು.

"ಇವತ್ತೇ ನಿಮ್ಮ ಮಗಳನ್ನು ಆಸ್ಪತ್ರೆಗೆ ಸೇರಿಸಿಬಿಡಿ...."

ಗಂಗ ಆಸ್ಪತ್ರೆಯಲ್ಲಿದ್ದ ನೂರಾರು ರೋಗಿಗಳೊಂದಿಗೆ ಒಬ್ಬಳಾದಳು. ರೂಮಿನಿಂದ ಹೊರಗೆ ಹೆಜ್ಜೆ ಹಾಕುತ್ತಿದ್ದ ವೈದ್ಯರನ್ನು ಮಾಧವ ಹಿಂಬಾಲಿಸಿದ. ಹಿಂದೆ ಕೇಳಿ ಬಂದ ಹೆಜ್ಜೆಯ ಸದ್ದನ್ನು ಆಲಿಸಿ ಆತ ನಿಂತುಕೊಂಡರು.

"ನನ್ನಿಂದೇನಾಗಬೇಕು?" ವೈದ್ಯರು ಮಾಧವನನ್ನು ಹುಬ್ಬೇರಿಸಿ ಶಾಂತ ಸ್ವರದಿಂದ ಕೇಳಿದರು.

"ಎಷ್ಟು ಹಣ ಖರ್ಚಾದರೂ ಚಿಂತೆಯಿಲ್ಲ, ಎಷ್ಟು ದಿವಸಗಳು ಬೇಕಾದರೂ ನಾನು ಮಗಳನ್ನು ಆಸ್ಪತ್ರೆಯಲ್ಲಿ ನಿಮ್ಮ ವಶದಲ್ಲಿ ಬಿಟ್ಟಿರುತ್ತೇನೆ. ಆದರೆ.... ಎಲ್ಲರಂತೆ ನನ್ನ ಮಗಳು ನಡೆಯುವಂತಾದರೆ ನನಗೆ ಬೇರೆ ಏನೂ ಬೇಡ. ಆ ರೀತಿ ಭರವಸೆಯನ್ನು ನನಗೆ ನೀವು ಕೊಡುವಿರಾ?"

ಮಾಧವ ಕೈ ಜೋಡಿಸಿ ವೈದ್ಯರನ್ನು ದೈನ್ಯ ಮುಖಭಾವದಿಂದ ಕೇಳಿಕೊಂಡ. ನಲವತ್ತು ವರ್ಷಕ್ಕೆ ಅವನ ದೇಹ ಹಾಗೂ ಮನಸ್ಸು ಎರಡೂ ಮುಪ್ಪಾಗಿದ್ದವು. ಅವನ ಮುಖಕ್ಕೆ ಮೂಳೆಯೇ ಪ್ರಧಾನವಾಗಿದ್ದು, ಕೆನ್ನೆಗಳು ಸುಕ್ಕುಗಳಿಗೆ ಉದಾರ ಮನಸ್ಸಿನಿಂದ ಆಶ್ರಯ ನೀಡಿದ್ದವು. ಮಾಧವನ ವಿಶಾಲವಾಗಿದ್ದ ಕಣ್ಣುಗಳ ಕೆಳಗಿದ್ದ ಚರ್ಮದ ಮೇಲೆ ವರ್ತುಲಾಕಾರದ ಕಪ್ಪುಬಣ್ಣದ ಗೆರೆಗಳು ಕಾಣಿಸಿಕೊಂಡಿದ್ದವು. ಅವನ ಮನಸ್ಸಿನಲ್ಲಾಗುತ್ತಿದ್ದ ಆಂದೋಳನ ಮುಖದ ಮೇಲೆ ಸ್ಪಷ್ಟವಾಗಿ ಕಾಣಿಸುತ್ತಿತ್ತು.

"ಕ್ಷಮಿಸಿ....ನಾನು ಈಗಲೇ ನಿಮಗೆ ಯಾವ ಭರವಸೆಯನ್ನೂ ಕೊಡಲಾರೆ. ಶಕ್ತಿಮೀರಿ ಪ್ರಯತ್ನಿಸಿ, ರೋಗಿಗಳಿಗೆ ಗುಣಪಡಿಸುವುದಕ್ಕಾಗಿಯೇ ನಾನಿರುವುದು."

ಸಿಸ್ಟರ್ ಒಬ್ಬಳು ಸುಮಾರು ಹತ್ತು ವರ್ಷ ವಯಸ್ಸಿನ ಹುಡುಗನೊಬ್ಬನನ್ನು ಕುರ್ಚಿಯ ಮೇಲೆ ಕೂರಿಸಿಕೊಂಡು, ಗಾಲಿಯಿದ್ದ ಆ ಕುರ್ಚಿಯನ್ನು ತಳ್ಳುತ್ತಾ ವೈದ್ಯರಿಗೆ ಎದುರಾದಳು.

"ಏನಯ್ಯಾ ರಾಜ....ಈಗ ನಿಂತುಕೊಳ್ಳೋದಕ್ಕೆ ಆಗುತ್ತೇನೊ ?"

"ಆಗುತ್ತದೆ ಡಾಕ್ಟರೆ. ಆದರೆ ಕೈ ಬಿಟ್ಟು ನಿಂತುಕೊಳ್ಳೋದಕ್ಕೆ ತುಂಬಾ ಭಯವಾಗುತ್ತೆ...."

"ಕೈ ಬಿಟ್ಟು ನಿಲ್ಲಬೇಡ. ಕೋಲು ತರಿಸಿ ಕೊಡ್ತೇನಿ. ಅದರ ಸಹಾಯ ದಿಂದ ಇನ್ನೂ ಆರು ತಿಂಗಳು ನೀನು ನಡೆಯಬೇಕು. ಆಮೇಲೆ ಕೈ ಬಿಟ್ಟು, ಯಾರ ಸಹಾಯವೂ ಇಲ್ಲದೆ ನಡೆಯುವುದನ್ನು ಅಭ್ಯಾಸ ಮಾಡಬೇಕು...."

ಆ ಹುಡುಗನ ತಲೆಯ ಹಿಂಭಾಗಕ್ಕೆ ಪ್ರೀತಿಯಿಂದ ವೈದ್ಯರು ಒಂದು ಏಟು ಕೊಟ್ಟು ಮುಂದೆ ಸಾಗಿದರು. ಸಿಸ್ಟರ್ ಆ ಗಾಲಿಯಿದ್ದ ಕುರ್ಚಿಯನ್ನು ತಳ್ಳುತ್ತಾ ಮುಂದೆ ಹೋದಳು. ದೂರದಲ್ಲೇ ಇವೆಲ್ಲವನ್ನು ನೋಡುತ್ತಾ ನಿಂತಿದ್ದ ಮಾಧವ.

ವೈದ್ಯರ ನಡೆ, ನುಡಿ, ಗಾಂಭೀರ್ಯ ಎಲ್ಲಕ್ಕಿಂತ ಮಿಗಿಲಾಗಿ ವೃತ್ತಿಯಲ್ಲಿ ಅವರಿಗಿದ್ದ ಆಸಕ್ತಿ ಅವನ ಮನಸ್ಸಿಗೆ ಹಿಡಿಸಿದವು.

* * * *

ಕುಮುದಳಿಗೆ ಮಗಳೊಂದಿಗೆ ಆಸ್ಪತ್ರೆಯಲ್ಲೇ ಬಿಡಾರ ಹೂಡಲು ಅವಕಾಶ ಸಿಕ್ಕಲಿಲ್ಲ. ತಮ್ಮ ಮುರಳೀಧರನ ಮನೆ ಆಸ್ಪತ್ರೆಗೆ ಬಹಳ ದೂರದಲ್ಲಿದ್ದರೂ, ಅವಳಿಗೆ ಅಲ್ಲಿರದೆ ಬೇರೆ ದಾರಿಯೇ ಇರಲಿಲ್ಲ.

ಮುರಳೀಧರ ಕೈ ತುಂಬ ಸಂಪಾದಿಸುತ್ತಿದ್ದ. ಅವನು, ಹೆಂಡತಿ, ಅವರಿಬ್ಬ ರನ್ನೂ ಹೆದರಿಸಿ ಹಪ್ಪುಬಸ್ತಿನಲ್ಲಿಟ್ಟಿದ್ದ ಅವರ ನಾಲ್ಕು ವರ್ಷದ ಕುಮಾರ ಕಂಠೀರವ ಇವರೆಲ್ಲರೂ ಪುಟ್ಟದಾಗಿದ್ದರೂ ಅಚ್ಚುಗಟ್ಟಾಗಿದ್ದ ಮಹಡಿಯ ಮನೆ ಯಲ್ಲಿ ವಾಸಿಸುತ್ತಿದ್ದರು.

ಮಾಧವ ಮಗಳನ್ನು ಆಸ್ಪತ್ರೆಗೆ ಸೇರಿಸಿ, ಅವಳ ಯೋಗಕ್ಷೇಮದ ಜವಾ ಬ್ದಾರಿಯನ್ನು ಹೆಂಡತಿಯ ವಶಕ್ಕೆ ಕೊಟ್ಟು ಊರಿಗೆ ಹಿಂತಿರುಗಿದ. ಹಣ ನೀರಿ ನಂತೆ ಖರ್ಚಾಗುತ್ತಿದ್ದುದರಿಂದ, ಅವನು ಸಂಪೂರ್ಣವಾಗಿ ಕೆಲಸವನ್ನು ಅಲಕ್ಷ್ಯ ಮಾಡುವಂತಿರಲಿಲ್ಲ. ಮಗಳ ಚಿಂತೆಯಲ್ಲಿ ಕುಟುಂಬದ ಬದುಕನ್ನು ಅವನು ಉದಾಸೀನ ಮಾಡಲಾರದವನಾದ.

ಅಪರೂಪಕ್ಕೆ ಆಗಮಿಸಿದ ಅಕ್ಕನನ್ನು ಆದರದಿಂದಲೇ ಬರಮಾಡಿಕೊಂಡ ಮುರಳಿ. ಆದರೆ ಅವನ ಹೆಂಡತಿ ಲಕ್ಷ್ಮಿ ಸ್ವಲ್ಪ ಸಿಡುಕು ಸ್ವಭಾವದವಳು. ಅಪರೂಪಕ್ಕೆ ಬಂದಿರುವ ನಾದಿನಿ ಒಂದೆರಡು ದಿನಗಳು ಮಾತ್ರ ನಿಲ್ಲದೆ, ತಿಂಗಳು ಗಟ್ಟಲೆ ತಮ್ಮ ಮನೆಯಲ್ಲಿ ಬಿಡಾರ ಹೂಡುವಳೆಂದು ತಿಳಿದಾಗ ಅವಳ ಮನಸ್ಸು ರೊಚ್ಚಿಗೆದ್ದಿತು.

ರಾತ್ರಿ ಕುಮುದ ಬಳಲಿ ಬೆಂಡಾಗಿ ಆಸ್ಪತ್ರೆಯಿಂದ ಮನೆಗೆ ಬರುತ್ತಿದ್ದಳು. ಅವಳು ಹನ್ನೆರಡು ಮೈಲಿ ದೂರದಲ್ಲಿದ್ದ ಆಸ್ಪತ್ರೆಗೆ ಪ್ರತಿದಿನವೂ ಬಸ್ಸಿನಲ್ಲಿ ಹೋಗಿ ಬರುತ್ತಿದ್ದಳು. ಬೆಳಿಗ್ಗೆ ಒಂಭತ್ತು ಘಂಟೆಗೇ ಊಟದ ಶಾಸ್ತ್ರ ಮಾಡಿ ಆಸ್ಪತ್ರೆಗೆ ಹೊರಟು ಹೋದರೆ ಮತ್ತೆ ಕುಮುದ ಮನೆ ಕಾಣುತ್ತಿದ್ದುದು ರಾತ್ರಿ ಎಂಟು ಹೊಡೆದ ಮೇಲೆ.

ಒಂದು ದಿನ ಎಂದಿನಂತೆ ಲಕ್ಷ್ಮಿ ಅವಳನ್ನು ಮುಗುಳ್ನಗೆಯಿಂದ ಸ್ವಾಗತಿಸ ಲಿಲ್ಲ. ಬಾಗಿಲು ತೆಗೆದು ಒಳಗೆ ಹೋಗಿ ಮಲಗಿಕೊಂಡ ಅತ್ತಿಗೆಯ ನಡವಳಿಕೆ ಯಿಂದ ಕುಮುದಳಿಗೆ ಸ್ವಲ್ಪ ಜುಗುಪ್ಸೆಯಾಯಿತು. ಮುರಳಿ ಕೆಲಸದ ಕಾರಣಾಂತರ ಬೇರೆ ಊರಿಗೆ ಹೊರಟು ಹೋಗಿದ್ದ.

"ತುಂಬ ತಲೆನೋಯುತ್ತಾ ಇದೆ ಕುಮುದ. ಅಡಿಗೆ ಮನೆಯಲ್ಲಿ ಊಟ ಇಟ್ಟಿದೀನಿ. ನೀನೇ ಬಡಿಸಿಕೊಂಡು ಬಿಡು...."

"ಹುಂ...."

ತಲೆನೋವಿನ ನೆಪ ಒಡ್ಡಿ, ಲಕ್ಷ್ಮಿ ತನ್ನ ಅಸಡ್ಡೆಯ ವರ್ತನೆಗೆ, ಸುಳ್ಳಿನ ಮೇಲು ಹೊದಿಕೆಯಿಂದ ಮರೆಮಾಡಲು ಪ್ರಯತ್ನಿಸಿದಳು.

ಮಾರನೆಯ ದಿನ ಲಕ್ಷ್ಮಿ ಆಳಿದೊಡನೆ ಆಡುತ್ತಿದ್ದ ಮಾತು ಕುಮುದಳ ಕಿವಿಯನ್ನು ತಲುಪಿತು. ಬಚ್ಚಲು ಮನೆಯಲ್ಲಿ ಮುಖ ತೊಳೆಯುತ್ತಿದ್ದ ನಾದಿನಿಗೆ ತನ್ನ ಮಾತು ಕೇಳಿಸಲೆಂದೇ ಲಕ್ಷ್ಮಿ ಧ್ವನಿ ಏರಿಸಿ ಮಾತನಾಡುತ್ತಿದ್ದಳು.

"ಮನೆಯಲ್ಲಿ ಒಂದು ಕಾಳು ಅಕ್ಕಿ ಇಲ್ಲ. ಅಂಗಡಿಯಲ್ಲೂ ಅಕ್ಕಿ ಮುಗಿದು ಹೋಗಿವೆ ಅಂತಿದ್ದೀಯಲ್ಲೋ ನಂಜ. ನಮ್ಮ ತಾಪತ್ರಯದ ಜೊತೆಗೆ ನಮ್ಮ ಮನೆಗೆ ಬರುವವರ ಹೋಗುವವರ ಕಾಟ ಬೇರೆ...."

ಕುಮುದಳ ಕೈಲಿದ್ದ ನೀರು ತುಂಬಿದ ಪಾತ್ರೆ ಕೆಳಗುರುಳುವುದರಲ್ಲಿತ್ತು. ಆ ಮಾತು ಅವಳ ಮುಖಕ್ಕೇ ರಾಚಿದಂತಾಯಿತು. ಆ ದಿನ ಊಟವನ್ನೂ ಸಹ ಮಾಡದೆ ಕುಕುದ ಆಸ್ಪತ್ರೆಗೆ ಹೊರಟು ಹೋದಳು. ಅವಳದು ಸಂಕೋಚ ಸ್ವಭಾವ. ಸ್ವಂತ ತಮ್ಮನ ಮನೆಯಲ್ಲಿರುವುದೇ ಅವಳಿಗೆ ಬೇಡವಾಗಿತ್ತು. ಅದರೆ ಮಗಳಿಗಾಗಿ ಅವಳು ಬೊಂಬಾಯಿಯಲ್ಲೇ ಇನ್ನೂ ಒಂದೆರಡು ತಿಂಗಳುಗಳು ಇರ ಬೇಕಾಗಿತ್ತು.

ಕುಮುದ ಆಸ್ಪತ್ರೆಯವರನ್ನೇ ಕಾಡಿ ಬೇಡಿ ಇರಲು ಒಂದು ರೂಮನ್ನು ಸಂಪಾದಿಸಿದಳು. ಮನೆಯಿಂದ ಆಸ್ಪತ್ರೆಗೆ, ಮನೆಗೆ ದಿನಕ್ಕೆರಡು ಬಾರಿ ಓಡಾಡು

ವುದು ನಿಂತಿತು. ಕುಮುದ ಎರಡು ಹೊತ್ತು ಹತ್ತಿರವಲ್ಲಿದ್ದ ಹೋಟೆಲಿನಿಂದ ಊಟ ತಂದು ರೂಮಿನಲ್ಲೇ ಕುಳಿತು ಊಟ ಮಾಡಲು ಪ್ರಾರಂಭಿಸಿದಳು.

* * * *

ಅವಳಿಗೆ ದೇಹಕ್ಕೆ, ಮನಸ್ಸಿಗೆ ಆಗುತ್ತಿದ್ದ ಯಾವ ತೊಂದರೆಯೂ ಲಕ್ಷ್ಯದಲ್ಲಿರುತ್ತಿರಲಿಲ್ಲ. ಎಲ್ಲವನ್ನೂ ಮಗಳ ಮುಖ ನೋಡುವುದರಲ್ಲಿ ಮರೆತು ಬಿಡುತ್ತಿದ್ದಳು.

ಧಗಧಗಿಸುತ್ತಿದ್ದ ಬೇಸಿಗೆ ಕಾಲದ ಒಂದು ಮಧ್ಯಾಹ್ನ ಕುಮುದ ಆತುರವಾಗಿ ಊಟ ಮಾಡಿಕೊಂಡು ಗಂಗ ಮಲಗಿದ್ದ ಮಂಚವನ್ನು ಸಮೀಪಿಸಿದಳು. ಚಿಕ್ಕ ವಯಸ್ಸಿನ ಗಂಗಳನ್ನು ಹೆಚ್ಚು ಹೊತ್ತು ಒಬ್ಬೊಂಟಿಗಳನ್ನಾಗಿ ಬಿಟ್ಟರೆ, ಅವಳು ಬೇಸರ ಮಾಡಿಕೊಳ್ಳುವಳೆಂಬ ಭೀತಿ ಕುಮುದಳದು! ದಿನದ ಹೆಚ್ಚು ಹೊತ್ತು ಮಗಳು ಮಲಗಿದ್ದ ಮಂಚದ ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕುಳಿತು ಕುಮುದ ಕಾಲ ಕಳೆಯುತ್ತಿದ್ದಳು.

ತಾಯಿಯ ಸಾಮೀಪ್ಯ ಮಗಳ ಬೇಸರವನ್ನು ದೂಡಿ ಹಾಕುತ್ತಿತ್ತು.

ತಾಯಿಯ ಮಾತು ಮಗಳ ಮುಖದಲ್ಲಿ ಮಂದಹಾಸವನ್ನು ಮಿನುಗಿಸುತ್ತಿತ್ತು.

ತಾಯಿಯ ಹೆಜ್ಜೆಯ ಸದ್ದು ಕಿವಿಗೆ ಸೋಂಕಿದೊಡನೆಯೆ ಗಂಗ ತಲೆ ತಿರುಗಿಸಿ ನೋಡಿದಳು.

"ಹುಷಾರಾಗಿದೀಯಾ ಗಂಗ....?"

"ಹುಂ....ತುಂಬಾ ಸೆಕೆ ಆಗುತ್ತೆ ಕಣಮ್ಮ. ಅಲ್ಲಾಡದೆ ಹೀಗೇ ಇನ್ನೂ ಎಷ್ಟು ದಿವಸ ಮಲಗಿರಬೇಕಮ್ಮ ನಾನು ?"

ಅಸಹನೆಯನ್ನು ಗಂಗ ಮುಖದ ಮೇಲೆ ಸ್ಪಷ್ಟಪಡಿಸಿದಳು.

ಎರಡು ದಿನಗಳಿಗೊಮ್ಮೆ ಒಂದು ಬಗೆಯ ಎಣ್ಣೆಯಿಂದ ಗಂಗೆಯ ಕಾಲನ್ನು ತಿಕ್ಕಿ, ಸ್ವಲ್ಪ ಹೊತ್ತಾದ ಮೇಲೆ ಆ ಕಾಲನ್ನು ಪಟ್ಟಿಗಳಿಂದ ಅಲ್ಲಾಡದಂತೆ ಬಿಗಿದು ಕಟ್ಟುತ್ತಿದ್ದರು. ಆ ಆಸ್ಪತ್ರೆಯ ವೈದ್ಯರು ಎರಡು ಕಾಲುಗಳನ್ನೂ ಬಿಗಿದು ಕಟ್ಟುತ್ತಿದ್ದರು. ಒಂದು ಕಾಲಿಗೆ ಸ್ವತಂತ್ರ ಕೊಟ್ಟರೆ ಅದರಿಂದ ಮತ್ತೊಂದು ಕಾಲಿಗೆ ಹಾನಿಯಾಗಬಹುದೆಂಬ ಭೀತಿ ಅವರದಾಗಿತ್ತು. ಆ ಬಿಗಿತ ಪೈರ್ಯವನ್ನು ಮರವನ್ನಾಗಿ ಮಾರ್ಪಡಿಸಿತು.

ಒಂದು ತಿಂಗಳಿನಿಂದ ಮರದ ತುಂಡಿನಂತೆ ಎರಡು ಕಾಲುಗಳನ್ನೂ ಬಿಗಿಸಿಕೊಂಡು ಮಲಗಿರುತ್ತಿದ್ದ ಮಗಳನ್ನು ನೋಡಿದಾಗಲೆಲ್ಲಾ ಕುಮುದಳ ಕಣ್ಣಿನಲ್ಲಿ

ನೀರು ತುಂಬುತ್ತಿತ್ತು. ಬೇಸಿಗೆಯ ಧಗೆ ಆ ಬಿಗಿತದ ನೋವಿಗೆ ಉರಿಯನ್ನೂ ಸೇರಿಸುತ್ತಿತ್ತು. ಆದರೂ ಗಂಗ ಮೌನವಾಗಿ ತನಗಾಗುತ್ತಿದ್ದ ಹಿಂಸೆಯನ್ನೆಲ್ಲಾ ಸಹಿಸುತ್ತಿದ್ದಳು. ಎಷ್ಟು ತೊಂದರೆಯಾದರೂ ಚಿಂತೆಯಿಲ್ಲ, ಎಲ್ಲರಂತೆ ತಾನೂ ನಡೆಯುವಂತಾದರೆ ಸಾಕು ಎಂಬ ಮನೋಭಿಲಾಷೆ ಅವಳದು! ಮಗಳ ಮೌನ ವೇದನೆ ತಾಯಿಯ ಎದೆಯ ಉರಿಯನ್ನು ಮತ್ತಷ್ಟು ಹೆಚ್ಚಿಸಿತು.

'ಇಷ್ಟು ಚಿಕ್ಕ ವಯಸ್ಸಿಗೇ ದೇವರು ಇವಳಿಗೆ ಎಷ್ಟೊಂದು ತಾಳ್ಮೆ ಕೊಟ್ಟಿದ್ದಾನೆ? ಒಂದು ಚಮಚ ಔಷಧಿಯನ್ನು ನಳಿನಿಗೆ ಕುಡಿಸುವುದರಲ್ಲಿ ನನ್ನ ಬುದ್ಧಿಯನ್ನೆಲ್ಲಾ ಖರ್ಚುಮಾಡಬೇಕು.'

ಕುಮುದ ಹತ್ತು ವರ್ಷದ ಗಂಗಳ ಸಹನೆಯನ್ನು ನಳಿನಿಯೊಂದಿಗೆ ತೂಗಿ ನೋಡಿದಳು. ಆದರೆ ಆ ದಿನ ಗಂಗ ಸಹನೆಯನ್ನು ಕಳೆದುಕೊಂಡು ಬೇಸರದಿಂದ ಮುಖ ಹಿಂಡಿದ್ದಳು.

ಕುಮುದ ಬೀಸಣಿಗೆಯನ್ನು ತೆಗೆದುಕೊಂಡು ಮಗಳಿಗೆ ಗಾಳಿ ಹಾಕತೊಡಗಿದಳು. ಗಂಗಳ ಹಣೆಯ ಮೇಲೆ ಸಾಲುಗಟ್ಟಿದ್ದ ಬೆವರಿನ ಹನಿಗಳನ್ನು ತನ್ನ ಸೆರಗಿನ ಕೊನೆಯಿಂದ ಒತ್ತಿದಳು. ಬೀಸುತ್ತಿದ್ದ ಗಾಳಿಯಿಂದ ಗಂಗೆಗೆ ಸ್ವಲ್ಪ ಹಿತವಾಯಿತು.

ತಡೆಯಲಾರದ ಬಿಗಿತದ ನೋವು, ಮಲಗಿದ್ದುದರಿಂದಾದ ಬೇಸರ, ಧಗೆಯ ಉರಿ ಇವುಗಳನ್ನು ಅನುಭವಿಸುತ್ತಿದ್ದರೂ, ಗಂಗ ತಾಯಿಯ ಕಡೆ ನೋಡಿ ತನ್ನ ಮುಖದ ಮೇಲೆ ಮುಗುಳ್ನಗೆಯೊಂದನ್ನು ತೇಲಿಸಿದಳು. ಆ ನಗೆ ಬಿರುಗಾಳಿಯಿಂದ ಅಲ್ಲೋಲ ಕಲ್ಲೋಲವಾಗಿರುವ ಸಮುದ್ರದಲ್ಲಿ ಶಾಂತ ರೀತಿಯಿಂದ ತೇಲಿ ಹೋಗುವ ಹಡಗಿನಷ್ಟೇ ಕೃತಕವಾಗಿತ್ತು. ನೋವು ತುಂಬಿದ ಆ ಮುಖದ ಮೇಲೆ ಕಾಣಿಸಿಕೊಂಡ ನಗೆಯನ್ನು ನೋಡಿ ಕುಮುದಳಿಗೆ ದುಃಖದಿಂದ ಬಿಕ್ಕಳಿಸುವಂತಾಯಿತು. ಕುರ್ಚಿಯಿಂದೆದ್ದು ರೂಮಿನಿಂದ ಹೊರಗೆ ಬಂದು ನಿಂತುಕೊಂಡ ಮೇಲೆ ಕುಮುದಳ ಕಣ್ಣೀರಿಗೆ ತಡೆಯಿಲ್ಲದಂತಾಯಿತು. ಅವಳ ಉದ್ವೇಗಗೊಂಡ ಎದೆಯ ಬಿರುಸಿನ ಏರಿಳಿತಕ್ಕೆ ತಕ್ಕಂತೆ ಚಲಿಸುತ್ತಿದ್ದ ಕುಮುದಳ ಹಸಿರು ಸೀರೆಯ ಮೇಲೆ ಅವಳ ಕಣ್ಣೀರಿನ ಹನಿಗಳು ಉದುರಿದವು. ಕಣ್ಣೀರು ಸುರಿಸಿದ ಮೇಲೆ ಮೋಡದಲ್ಲಿ ಕಟ್ಟಿಕೊಂಡಿದ್ದ ನೀರು ಮಳೆಯಾಗಿ ಬಿದ್ದ ಮೇಲೆ ಆಕಾಶ ನಿರ್ಮಲವಾಗುವಂತೆ ಕುಮುದಳ ಮನಸ್ಸಿಗೆ ಶಾಂತಿಯ ನೆಲೆ ಸಿಕ್ಕಿತು.

ಕಾಲಿಗೆ ಕೊಡುತ್ತಿದ್ದ ವ್ಯಾಯಾಮ, ಎಣ್ಣೆಯ ಚಿಕಿತ್ಸೆ ಎರಡು ತಿಂಗಳಿನವರೆಗೂ ನಡೆಯಿತು. ಅದರಿಂದ ಗಂಗೆಯ ಕಾಲಿಗೆ ಶಕ್ತಿ ಬರಲಿಲ್ಲ.

“ಈ ಚಿಕಿತ್ಸೆಯಿಂದ ನಿಮ್ಮ ಮಗಳಿಗೆ ಯಾವ ಪ್ರಯೋಜನವೂ ಆಗಲಿಲ್ಲ....”

ಗಂಗೆಯ ಕಾಲಿಗೆ ಕಟ್ಟಿದ್ದ ಪಟ್ಟಿಯನ್ನು ಬಿಚ್ಚಿ ಪರೀಕ್ಷೆ ಮಾಡುತ್ತಿದ್ದ ವೈದ್ಯರು ಸಮೀಪದಲ್ಲೇ ನಿಂತು ನೋಡುತ್ತಿದ್ದ ಕುಮುದಳಿಗೆ ಹೇಳಿದರು. ಅವರು ಸತ್ಯ ಸಂಗತಿಯನ್ನು ಸ್ಪಷ್ಟಪಡಿಸಿದರು.

ಮುಗಿಲ ಮೇಲೆ ಕುಳಿತು ಸವಾರಿಮಾಡುತ್ತಿದ್ದವಳು ಇದ್ದಕ್ಕಿದ್ದಂತೆ ಭೂಮಿಗೆ ಬಿದ್ದಂತಾಗಿ ಕುಮುದಳ ಆಸೆ, ಆಕಾಂಕ್ಷೆ, ಭರವಸೆಗಳೆಲ್ಲಾ ವೈದ್ಯರ ಮಾತು ಕೇಳಿ ಭಸ್ಮವಾಗಿ ಹೋದವು. ಕ್ಷಣ ಕಾಲ ಆಕೆಯ ಎದೆಯ ಬಡಿತ ತಟಸ್ಥವಾಯಿತು.



“ಎರಡು ತಿಂಗಳಿನಿಂದ ಮಾಡಿದ ಚಿಕಿತ್ಸೆಗಳಿಂದ ಯಾವ ಪ್ರಯೋಜನವೂ ಆಗಲಿಲ್ಲವೆ ?”

ವಿಸ್ಮಯದಿಂದ ಪ್ರಶ್ನೆ ಹಾಕಿದಳು ಕುಮುದ. ಅವಳ ಪ್ರಶ್ನೆಯ ಹಿಂದೆ ನಿರಾಶೆ ನಿಂತು ನೆರಳಾಟವಾಡುತ್ತಿತ್ತು.

ಕುಮುದಳಿಗಿಂತ ಗಂಗಳ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದ ವೈದ್ಯರಿಗೆ ಹೆಚ್ಚಿನ ನಿರಾಶೆಯಾಗಿತ್ತು. ಯೋಚನೆಯಲ್ಲಿ ಮೈಮರೆತು ವೈದ್ಯರು ತಲೆ ತಗ್ಗಿಸಿದ್ದುದರಿಂದ, ಅವರ ಕೂದಲಿಲ್ಲದ ಬಟ್ಟ ತಲೆಯ ಹೊಳಪು ಮಾತ್ರ ಕುಮುದಳಿಗೆ ಕಾಣಿಸುತ್ತಿತ್ತು. ಕುಮುದಳ ವಿಸ್ಮಯದ ಪ್ರಶ್ನೆಗೆ ಆತ ಮೌನವಾಗಿ ತಲೆಯಾಡಿಸಿದರು.

“ನಿಮ್ಮ ಯಜಮಾನರಿಗೆ ಕೂಡಲೆ ಕಾಗದ ಹಾಕಿ ಕರೆಸಿಕೊಳ್ಳಿ....”

“ಯಾಕೆ ?” ಕುಮುದ ಕಾತರದಿಂದ ಕೇಳಿದಳು.

“ನಿಮ್ಮ ಮಗಳ ಕಾಲಿಗೆ ನಾನು ಶಸ್ತ್ರ ಚಿಕಿತ್ಸೆಯನ್ನು ಮಾಡುತ್ತೇನೆ. ನಾನು ಮಾಡುವ ಚಿಕಿತ್ಸೆಗಳಲ್ಲಿ ಇದೇ ಕೊನೆಯದು. ಇದರಿಂದ ಸ್ವಲ್ಪ ಪ್ರಯೋಜನವಾಗಬಹುದು. ನಾನೀಗಲೇ ಯಾವ ಭರವಸೆಯನ್ನೂ ನಿಮಗೆ ಕೊಡಲಾರೆ.”

“ಅದರಿಂದ ಸ್ವಲ್ಪವಾದರೂ ಮಗುವಿನ ಕಾಲಿಗೆ ಶಕ್ತಿ ಬರಬಹುದೆ ?”

“ನಾನು ಏನನ್ನೂ ಈಗಲೇ ಹೇಳಲಾರೆ. ಶಸ್ತ್ರ ಚಿಕಿತ್ಸೆಯನ್ನು ನಿಮ್ಮ ಯಜಮಾನರ ಅಪ್ಪಣೆಯಿಲ್ಲದೆ ನಾನು ಮಾಡುವುದಿಲ್ಲ. ಅವರು ಆ ಸಂದರ್ಭದಲ್ಲಿ ಮಗುವಿನ ಬಳಿ ಇದ್ದರೆ ಒಳ್ಳೆಯದು.”

ಗಾಳಿ ಬೆಳಕುಗಳ ಸಹವಾಸವಿಲ್ಲದೆ ತಿಂಗಳುಗಟ್ಟಲೆ ಬಟ್ಟೆಗಳ ಬಿಗಿತದಲ್ಲಿದ್ದ

ಗಂಗೆಯ ಕಾಲುಗಳು ಸಣ್ಣಗಾಗಿ ಹತ್ತಿಯಂತೆ ಬಿಳುಚಿಕೊಂಡಿದ್ದವು. ಸ್ವಾಭಾವಿಕ ವಾಗಿ ಕೃಶವಾಗಿದ್ದ ಅವಳ ಬಲಗಾಲು ಸಿಪ್ಪೆ ಸುಲಿದ ಬಾಳೆಯ ಹಣ್ಣಿನಂತಿತ್ತು.

ಹೆಂಡತಿಯ ಕಾಗದ ಕಂಡ ಕೂಡಲೆ ಮಾಧವ ಬೊಂಬಾಯಿಗೆ ಪ್ರಯಾಣ ಮಾಡಿದ. ಗಂಡನ ಮುಖ ಕಂಡೊಡನೆ ಕುಮುದಳ ದೇಹದಲ್ಲಿ ಚೈತನ್ಯ ತುಂಬಿ ಕೊಂಡಂತಾಯಿತು. ಹಾಸಿಗೆ ಬಿಟ್ಟೇಳದೆ, ವೈದ್ಯರ ಚಿಕಿತ್ಸೆಗಳಿಗೆ ಮೌನವಾಗಿ ತನ್ನ ಜೀವನನ್ನೊಡ್ಡಿ ಕಂಗೆಟ್ಟಿದ್ದ ಮಗಳ ಮುಖದಲ್ಲಿ ಜೀವಕಳೆ ಮರೆಯಾಗಿರುವುದನ್ನು ಮಾಧವ ಗಮನಿಸಿದ. ಹೃದಯದಿಂದ ದುಃಖ ಉಮ್ಮಳಿಸಿಕೊಂಡು ಬಂತು. ಅವನು ಮಗಳ ಕೈಯನ್ನು ತನ್ನ ಕೈಲಿರಿಸಿಕೊಂಡ. ಮಾತು ಅವನ ಬಾಯಿಂದ ಹೊರಡಲು ಮುಷ್ಕರ ಹೂಡಿತು. ಕಣ್ಣಿನಲ್ಲಿ ನೀರು ತುಂಬಿ ಕೆಳಗುರುಳುವುದರಲ್ಲಿ ದ್ದಾಗ ಮಾಧವ ಎದ್ದು ಹೊರಗೆ ಹೊರಟು ಹೋದ.

ನಾಲ್ಕು ಘಂಟೆಗಳಾದ ಮೇಲೆ ಗಂಗಳನ್ನು ಶಸ್ತ್ರ ಚಿಕಿತ್ಸೆ ಮುಗಿಸಿ ರೂಮಿ ನಿಂದ ಹೊರಗೆ ಕರೆತಂದರು. ಆ ನಾಲ್ಕು ಘಂಟೆಗಳ ಕಾಲ ಮಾಧವ, ಕುಮುದರು ಪಟ್ಟ ಯಾತನೆ!

ಆಸ್ಪತ್ರೆಯ ಕಂಬಕ್ಕೆ ಒರಗಿ ಕುಳಿತಿದ್ದ ಮಾಧವ, ಹಾಗೇ ಬಹು ದೂರ ದಲ್ಲಿ ಕಾಣಿಸುತ್ತಿದ್ದ ತೆಂಗಿನ ಗರಿಯ ತುದಿಯನ್ನು ನೋಡುತ್ತಾ ಕುಳಿತಿದ್ದ. ಕುಮುದ ಅವನ ಭುಜದ ಮೇಲೆ ಕೈಯಿಟ್ಟಾಗಲೇ ಅವನಿಗೆ ಎಚ್ಚರ!

ಮೌನವಾಗಿ ಮಾಧವ ಮಡದಿಯ ಕೈಯನ್ನು ತನ್ನ ಕೈಯೊಳಗಿರಿಸಿ ಕೊಂಡ. ಇಬ್ಬರ ಕೈಗಳೂ ನಡುಗುತ್ತಿದ್ದವು. ಧೈರ್ಯ ಹೇಳುವ ಸಾಹಸ ಅವರಿಬ್ಬರಲ್ಲಿ ಯಾರಿಗೂ ಉಳಿದಿರಲಿಲ್ಲ.

ಶಸ್ತ್ರ ಚಿಕಿತ್ಸೆ ಮುಗಿಸಿ ವೈದ್ಯರು ರೂಮಿನಿಂದ ಹೊರಗೆ ಹೆಜ್ಜೆ ಹಾಕಿದರು.

"ನನ್ನ ಮಗಳು ಹುಷಾರಾಗಿದ್ದಾಳೆಯೆ ?"

"ಆಪರೇಷನ್ ನನ್ನ ನಿರೀಕ್ಷೆಯಂತೆಯೇ ಆಯಿತು. ಫಲಿತಾಂಶವನ್ನು ಈಗಲೇ ಹೇಳಲಾರೆ. ನಿಧಾನವಾಗಿ ನಿರೀಕ್ಷಿಸಿ ನೋಡಬೇಕು. ಕಾದು ನೋಡಿ ದರೆ ಕಾಲಿನ ಶಕ್ತಿಯನ್ನು ನಾವು ತಿಳಿಯಬಹುದು...."

ಮನಸ್ಸನ್ನು ಸೆರೆ ಹಿಡಿದಿದ್ದ ಭೀತಿ, ಕಾತರ, ಕಳವಳದಿಂದ ಮಾಧವ ಬಿಡುಗಡೆ ಹೊಂದಿದ.

ಶಸ್ತ್ರ ಚಿಕಿತ್ಸೆಯ ಫಲಿತಾಂಶವನ್ನು ತಮಗೆ ಕಾಗದದ ಮೂಲಕ ತಿಳಿಸುತ್ತಿರ ಬೇಕೆಂದು ವೈದ್ಯರು ಮಾಧವನಿಗೆ ಹೇಳಿ ಊರಿಗೆ ಗಂಗಳನ್ನು ಕಳುಹಿಸಿಕೊಟ್ಟರು. ಮಾಧವ ಹೆಂಡತಿ ಮಗಳೊಡನೆ ಮಂಡ್ಯಕ್ಕೆ ಹಿಂತಿರುಗಿದ.

* * * *

"ಅಮ್ಮಾ....ಪರೀಕ್ಷೆಗೆ ಇನ್ನೆರಡು ತಿಂಗಳಿವೆ. ಮೇಷ್ಟರನ್ನು ಬರಹೇಳಮ್ಮ."

ಊರಿಗೆ ಮರಳಿ ಬಂದ ಗಂಗೆಗೆ ಪರೀಕ್ಷೆಯ ನೆನಪಾಯಿತು. ಬರಲಿರುವ ಪರೀಕ್ಷೆಯನ್ನು ಅಲಕ್ಷಿಸಿ ಒಂದು ವರ್ಷ ಹಾಳು ಮಾಡಿಕೊಳ್ಳಲು ಅವಳು ಸಿದ್ಧಳಾಗಿರಲಿಲ್ಲ.

ಎಲ್. ಎಸ್. ಪರೀಕ್ಷೆಗೆ ಖಾಸಗಿಯಾಗಿ ಕುಳಿತುಕೊಳ್ಳಲು ಗಂಗೆ ತಯಾರಿ ನಡೆಸುತ್ತಿದ್ದಳು. ಮೇಷ್ಟರೊಬ್ಬರು ಮನೆಗೇ ಬಂದು ಅವಳಿಗೆ ಪಾಠ ಹೇಳಿಕೊಡುತ್ತಿದ್ದರು. ಬೊಂಬಾಯಿಗೆ ಹೊರಟು ಹೋದಾಗ ಗಂಗೆಗೆ ಎರಡು ತಿಂಗಳ ಪಾಠ ತಪ್ಪಿಹೋಗಿತ್ತು.

"ಗಂಗ, ಈ ವರ್ಷ ನೀನು ಪರೀಕ್ಷೆಗೆ ಕುಳಿತುಕೊಂಡರೆ ಫೇಲಾಗುವುದು ಖಂಡಿತ. ಎರಡು ತಿಂಗಳ ಪಾಠ ತಪ್ಪಿಹೋಗಿದೆ. ಮುಂದಿನ ವರ್ಷ ಪರೀಕ್ಷೆಗೆ ಕಟ್ಟಿ ಮೊದಲನೆಯ ದರ್ಜೆಯಲ್ಲಿ ತೇರ್ಗಡೆಯಾಗುವಿಯಂತೆ...."

ಮಾಧವ ಮಾಡುತ್ತಿದ್ದ ಕೆಲಸದ ಮಧ್ಯೆ ಮಗಳ ಮಾತಿಗೆ ಕಿವಿಗೊಟ್ಟು ಅವಳಿಗೆ ಬುದ್ಧಿವಾದ ಹೇಳಿದ.

"ಉಹುಂ, ಮಾಲಿನಿ ಈ ವರ್ಷ ಎಲ್. ಎಸ್. ಪಾಸುಮಾಡಿ ಹೈಸ್ಕೂಲಿಗೆ ಸೇರಿಬಿಡ್ತಾಳೆ. ನಾನು ಈ ವರ್ಷ ಪರೀಕ್ಷೆಗೆ ಹೋಗದಿದ್ದರೆ ಅವಳು ಮುಂದಕ್ಕೆ ಹೊರಟು ಹೋಗ್ತಾಳೆ."

ಮಾಲಿನಿ ಪದ್ಮಾವತಮ್ಮನವರ ಏಕಮಾತ್ರ ಪ್ರೀತಿಯ ಪುತ್ರಿ. ಚುರುಕು ಬುದ್ಧಿಯ ಮಾಲಿನಿ, ಗಂಗೆಯರಿಬ್ಬರೂ ಸಮವಯಸ್ಸಿನವರು. ಇಬ್ಬರೂ ಸ್ಪರ್ಧೆ ನಡೆಸುತ್ತಾ ವಿದ್ಯಾಭ್ಯಾಸ ಮುಂದುವರಿಸುತ್ತಿದ್ದರು. ಎಲ್ಲ ಮಕ್ಕಳಂತೆ ಮಾಲಿನಿ ಶಾಲೆಗೆ ಹೋಗಿ ಕಲಿಯುತ್ತಿದ್ದರೆ, ಗಂಗ ಉಪಾಧ್ಯಾಯರ ಸಹಾಯದಿಂದ ಮನೆಯಲ್ಲೇ ಕುಳಿತು ಎಲ್. ಎಸ್. ಪರೀಕ್ಷೆಗೆ ಕುಳಿತಿದ್ದಳು.

ಮಗಳ ಉತ್ಸಾಹವೆಂಬ ಚಿಗುರಿನ ಕೊನೆಯನ್ನು ಚಿಗುಟಿ ಹಾಕುವ ಮನಸ್ಸು ಕುಮುದಳಿಗಾಗಲಿಲ್ಲ. ಗಂಗೆಗೆ ವಿದ್ಯಾಭ್ಯಾಸದಲ್ಲಿದ್ದ ಆಸಕ್ತಿಯನ್ನು ಕಂಡು ಮಾಧವ ತೃಪ್ತಿ ಹೊಂದಿದ.

ತಂದೆ ತಾಯಿಗಳು ಸೋತು ಮಗಳ ಹಠಕ್ಕೆ ಮಣಿದರು.

ಗಂಗ ಬರಲಿರುವ ಪರೀಕ್ಷೆಗೆ ತಯಾರಾಗಲು ಸಿದ್ಧಳಾದಳು.

ವಿಶಾಲವಾಗಿದ್ದ ವರಾಂಡದ ಮಧ್ಯದಲ್ಲಿದ್ದ ಬೆತ್ತದ ಕುರ್ಚಿಯ ಮೇಲೆ ಕುಳಿತಿದ್ದ ನಳಿನಿ ಪುಸ್ತಕದಲ್ಲಿ ಮೈಮರೆತಿದ್ದಳು. ಕಳ್ಳ ಹೆಜ್ಜೆಯಿಟ್ಟು ಗೋಪಾಲ

ಹಿಂದೆ ಬಂದು ನಿಂತಾಗಲೂ ಅವಳಿಗೆ ಅವನ ಸುಳಿವು ಸಿಕ್ಕಲಿಲ್ಲ. ಅವನು ನಳಿನಿಯ ಕಣ್ಣುಗಳನ್ನು ಹಿಂದಿನಿಂದ ಬಂದು ತನ್ನ ಕೈಗಳಿಂದ ಮುಚ್ಚಿದ. ಆಸಕ್ತಿಯಿಂದ ಪುಸ್ತಕದ ಮೇಲೆ ಓಡುತ್ತಿದ್ದ ಕಣ್ಣುಗಳಿಗೆ ಬಂಧನವಾದಾಗ ನಳಿನಿ ಸಹಜವಾಗಿ ಸಿಟ್ಟಾದಳು.

"ನನ್ನ ಕಣ್ಣುಗಳನ್ನು ಯಾರು ಮುಚ್ಚಿದ್ದಾರೆ ?" ಎಂಬ ಕುತೂಹಲವೂ ಅವಳಿಗಾಗದಿರಲಿಲ್ಲ.

ಗೋಪಾಲ ಕುಮುದಳ ತಮ್ಮ. ಅವನು ಇಂಜನಿಯರ್ ಆಗಲು ಉತ್ಸಾಹ ದಿಂದ ವಿದ್ಯಾಭ್ಯಾಸ ಮುಗಿಸುವ ಆತುರದಲ್ಲಿದ್ದ. ಗೋಪಾಲ ಕುಹಕಿ. ಅವರಿವ ರನ್ನು ಕುಚೋದ್ಯಮಾಡದಿದ್ದರೆ ಅವನಿಗೆ ಆ ದಿನದ ಊಟವೇ ಸರಿಯಾಗಿ ಅರಗು ತ್ತಿರಲಿಲ್ಲ. ಬುದ್ಧಿವಂತನಾದ, ನೋಡಲು ಲಕ್ಷಣವಾಗಿದ್ದ ತಮ್ಮನಿಗೆ ಮಗಳನ್ನು ಧಾರೆಯೆರೆದು ಕೊಡುವ ಹಂಬಲ ಕುಮುದಳದು. ತಮ್ಮನ ವಿದ್ಯಾಭ್ಯಾಸ ಮುಗಿಯಲೆಂದು ಅವಳು ಕಾಯುತ್ತಿದ್ದಳು. ಅಲ್ಲಿಯವರೆವಿಗೂ ಮದುವೆಯ ಪ್ರಸ್ತಾಪ ಮಾಡಬಾರದೆಂದು ಮನಸ್ಸಿನಲ್ಲೇ ನಿರ್ಧರಿಸಿಕೊಂಡಿದ್ದಳು.

ನಳಿನಿ ತೊಡೆಯ ಮೇಲೆ ಪುಸ್ತಕವನ್ನಿಟ್ಟು ತನ್ನ ಕೈಗಳಿಂದ ಕಣ್ಣುಗಳ ಮೇಲಿದ್ದ ಕೈಗಳನ್ನು ಒಂದು ಬಾರಿ ನೇವರಿಸಿದಳು.

ತನ್ನ ಕಣ್ಣುಗಳನ್ನು ಹಿಂದಿನಿಂದ ಬಂದು ಮುಚ್ಚಿರುವ ವ್ಯಕ್ತಿಯನ್ನು ಪತ್ತೆ ಹಚ್ಚುವ ಕೆಲಸಕ್ಕೆ ನಳಿನಿ ಮನಸ್ಸು ಕೊಟ್ಟಳು.

"ಅಬ್ಬಾ ! ಎಷ್ಟೊಂದು ಒರಟಾದ ಕೈ !! ಗಂಡಸರ ಕೈಗಳಂತಿದೆ...."

ಆ ಮಾತಿಗೆ ಹೊರಹೊಮ್ಮಲಿದ್ದ ನಗುವನ್ನು ಹಲ್ಲಿನಿಂದ ಕಚ್ಚಿ ತಡೆದ ಗೋಪಾಲ.

"ಸ್ವಲ್ಪ ಬಿಗಿತ ಕಡಿಮೆ ಮಾಡಿದರೆ ಬಡಪಾಯಿ ಬದುಕ್ಕೋತೀನಿ. ಕಣ್ಣು ತುಂಬಾ ನೋಯುತ್ತಾ ಇದೆ....ಬಿಡಿ...."

ನಳಿನಿ ನೋವಿನಿಂದ ನರಳಿದಳು.

ಗೋಪಾಲ ಬಿಗಿತವನ್ನು ಕಡಿಮೆ ಮಾಡಿದ. ಅದನ್ನೇ ಎದುರು ನೋಡು ತ್ತಿದ್ದ ನಳಿನಿ ಛಂಗನೆದ್ದು ಅವನ ಕೈಗಳನ್ನು ಕಿತ್ತುಹಾಕಿ ತನ್ನ ಕಣ್ಣುಗಳಿಗೆ ಬಂಧನದ ವಿಮೋಚನೆ ಮಾಡಿಕೊಂಡಳು.

"ನೀನೇನೋ ಗೋಪಾಲ ! ನಾನು ಯಾರೋ ಅಂತ ಹೆದರಿಬಿಟ್ಟಿದ್ದೆ...."

" 'ಬಿಡಿ' ಅಂತ ಇದ್ದಕ್ಕಿದ್ದ ಹಾಗೆ ನನಗೆ ಬಹುವಚನ ಪ್ರಾರಂಭಿಸಿಬಿಟ್ಟಿ ಯಲ್ಲಾ ಅಂತ ನನಗೆ ದಿಗ್ಭ್ರಮೆಯಾಗಿ ಕೈ ಸಡಿಲಮಾಡಿಬಿಟ್ಟೆ."

ಗೋಪಾಲ ತುಟಿಗಳನ್ನು ವಕ್ರವಾಗಿ ಅರಳಿಸಿ ನಕ್ಕಾಗ ನಳಿನಿ ಸಿಟ್ಟಿನಿಂದ ಜಗಳಕ್ಕೆ ಸಿದ್ಧಳಾದಳು.

"ಗೋಪಾಲ ಅಂತ ಗೊತ್ತಿದ್ರೆ ನಾನು ಬಹುವಚನದಲ್ಲಿ ಮಾತನಾಡಿಸ್ತಾನೇ ಇರಲಿಲ್ಲ...."

"ನಾಳೆ ನೀನು ಅವನ ಹೆಂಡತಿಯಾದ ಮೇಲಾದರೂ ಬಹುವಚನದಲ್ಲಿ ಮಾತನಾಡಿಸಬೇಕಲ್ಲ ?"

ಕುಮುದ ಮಾತಿನ ನಡುವೆ ಬಾಯಿ ಹಾಕಿದಳು. ಅಡಿಗೆ ಮನೆಯಲ್ಲಿ ಕೈ ತುಂಬ ಕೆಲಸವಿದ್ದರೂ ತಮ್ಮನ ಧ್ವನಿ ಕೇಳಿ ಅವಳು ಮಿಂಚಿನ ವೇಗದಲ್ಲಿ ವರಾಂಡಕ್ಕೆ ಬಂದಿದ್ದಳು. ಅಪರೂಪಕ್ಕೆ ಬಂದಿರುವ ತಮ್ಮನನ್ನು ನೋಡುವ ಉತ್ಸಾಹದಲ್ಲಿ ಕುಮುದ ಹಿಟ್ಟಿನ ಕೈಯನ್ನು ಉಟ್ಟ ಸೀರೆಯ ಸೆರಗಿನ ಕೊನೆಗೇ ಒರಸಿದ್ದಳು.

"ಯಾಕೆ ? ಈ ಗುಡಾಣ ಗೋಪಾಲನ್ನ ನಾನು ಖಂಡಿತ ಮದುವೆ ಯಾಗೋದಿಲ್ಲ...."

ನಳಿನಿ ಮುಖ ಉಬ್ಬಿಸಿದಳು. ಗುಂಡಗಿದ್ದ ಗೋಪಾಲ ಗುಡಾಣದಂತಿಲ್ಲ ದಿದ್ದರೂ ಅವನನ್ನು ಹಾಸ್ಯ ಮಾಡಿ ರೇಗಿಸಲು ನಳಿನಿ ಸ್ವಲ್ಪ ಉತ್ಪ್ರೇಕ್ಷೆ ಮಾಡಿದಳು.

"ನೀನೇನು ತೆಳ್ಳಗೆ ಬಳ್ಳಿಯಂತೆ ಬಳಕುತ್ತಾ ಇದೀಯೇನೊ? ಅಕ್ಕ, ಇದೇ ರೀತಿ ನಳಿನಿ ಊದುತ್ತಾ ಇದ್ದರೆ ನಿಮ್ಮ ಮನೆಯ ಬಾಗಿಲುಗಳನ್ನೆಲ್ಲಾ ದೊಡ್ಡದು ಮಾಡಿಸಬೇಕಾಗುತ್ತದೆ...."

"ಗೋಪಿ, ಸ್ನಾನಮಾಡಿ ಮೊದಲು ಹೊಟ್ಟೆತುಂಬಿಸಿಕೊ. ಆಮೇಲೆ ಇಬ್ಬರೂ ಎಷ್ಟು ಹೊತ್ತುಬೇಕಾದರೂ ಜಗಳಾ ಆಡೋರಂತೆ. ಮುಂದೆ, ಜೀವನ ದುದ್ದಕ್ಕೂ ಸತಿಪತಿಗಳಾಗಿ ಜಗಳ ಕಾಯೋದು ಇದ್ದೇ ಇದೆಯಲ್ಲಾ...."

ಕುಮುದ ಅರ್ಥಗರ್ಭಿತವಾಗಿ ತಮ್ಮನ ಕಡೆ ನೋಡಿದಳು. ತಂದೆ ತಾಯಿ ಗಳ ಒಪ್ಪಿಗೆಯಿದ್ದರೂ, ತಮ್ಮನ ಅಭಿಪ್ರಾಯ ತಿಳಿಯಲು ಕುಮುದ ಪ್ರಯತ್ನಿ ಸಿದಳು. ಗೋಪಾಲ ಅಕ್ಕನಿಗೆ ಯಾವ ಉತ್ತರವನ್ನೂ ಕೊಡದೆ ಸಿಳ್ಳು ಹಾಕುತ್ತಾ ಬಚ್ಚಲ ಮನೆಯ ಕಡೆ ಹೆಜ್ಜೆ ಹಾಕಿದ.

"ಭಾವ ಎಲ್ಲಿಗೆ ಹೋಗಿದ್ದಾರೆ ಅಕ್ಕ ?"

ಪಲ್ಯದ ರುಚಿ ನೋಡುತ್ತಾ ಇದ್ದ ಗೋಪಾಲನಿಗೆ ಇದ್ದಕ್ಕಿದ್ದಂತೆ ಭಾವನ ನೆನಪಾಯಿತು.

"ಇವತ್ತು ಎಲ್. ಎಸ್. ಪರೀಕ್ಷೆಯ ಫಲಿತಾಂಶ ಹೊರಬೀಳುವುದು. ಗಂಗೆಗೆ ಪರೀಕ್ಷೆಯಲ್ಲಿ ಏನಾಗಿದೆಯೊ ತಿಳಿದು ಬರೋಣವೆಂದು ಹೋಗಿದ್ದಾರೆ...."

"ಏನು ! ಗಂಗ ಆಗಲೇ ಎಲ್. ಎಸ್. ಪರೀಕ್ಷೆಗೆ ಕಟ್ಟಿದ್ದಾಳೆಯೆ ? ಅವಳು ಇನ್ನೂ ಬೆರಳು ಚೀಪುತ್ತಾ ಶಿಶುವಿಹಾರಕ್ಕೆ ಹೋಗುತ್ತಿರಬಹುದೆಂದು ನಾನು ತಿಳಿದಿದ್ದೆ...."

ಗೋಪಾಲ ಪಕ್ಕದಲ್ಲಿ ಕುಳಿತು ಊಟ ಮಾಡುತ್ತಿದ್ದ ಗಂಗೆಯ ಚೇಳು ಕೊಂಡಿಯಂತೆ ತಿರುಚಿಕೊಂಡಿದ್ದ ಮೋಟು ಜಡೆಯನ್ನು ಹಿಡಿದು ಕುಚೋದ್ಯ ದಿಂದ ಜಗ್ಗಿದ.

ನಳಿನಿ ಊಟ ಮುಗಿಸಿ ಹಜಾರದಲ್ಲಿದ್ದ ಕುರ್ಚಿಯ ಮೇಲೆ ಕುಳಿತು ರೇಡಿಯೋ ತಿರುಗಿಸುತ್ತಿದ್ದಳು. ಗಂಗ ತೆವಳುತ್ತಾ ಬಂದು ಕುರ್ಚಿಯ ಕಾಲು ಹಿಡಿದು ನಿಧಾನವಾಗಿ ಅದರ ಮೇಲೆ ಕುಳಿತುಕೊಂಡಳು. ಕುಮುದ ತನ್ನ ನೊಡನೆ ಮಾತನಾಡುತ್ತಾ ಹಜಾರದ ಮಧ್ಯದಲ್ಲಿದ್ದ ರತ್ನಗಂಬಳಿಯ ಮೇಲೆ ಕುಳಿತುಕೊಂಡಳು.

ನಳಿನಿ ಬೇಸರದಿಂದ ಮುಖವನ್ನು ವಕ್ರಮಾಡಿ ರೇಡಿಯೋ ನಿಲ್ಲಿಸಿದಳು.

"ಯಾಕೆ ನಳಿನಿ, ಇಷ್ಟು ಬೇಗ ನೀನು ಕೇಳುತ್ತಿದ್ದ ಕಾರ್ಯಕ್ರಮ ಬೇಸರ ವಾಯಿತೆ ?" ಗೋಪಾಲ ಹುಬ್ಬೇರಿಸಿ ಕೇಳಿದ.

"ನಾನು ಕೇಳುತ್ತಿದ್ದ 'ಮಹಿಳೆಯರಿಗಾಗಿ ಕಾರ್ಯಕ್ರಮದಲ್ಲಿ' ಉಪ್ಪಿಟ್ಟು ಮಾಡುವುದು ಹೇಗೆಂದು ತಿಳಿಸುತ್ತಿದ್ದರು. ಉಪ್ಪಿಟ್ಟು ಒಂದು ಮಹಾ ಘನವಾದ ತಿಂಡಿಯೆ ? ಅದನ್ನು ಮಾಡೋದು ಹೇಗೇಂತ ರೇಡಿಯೋದಲ್ಲಿ ಕೇಳಬೇಕೆ ?"

"ನಿನಗೆ ಉಪ್ಪಿಟ್ಟು ಮಾಡೋದಕ್ಕೆ ಬರುತ್ತೋ ?"

ಪರೀಕ್ಷಕನಂತೆ ಪ್ರಶ್ನೆ ಚಿಮ್ಮಿಸಿದ ಗೋಪಾಲ.

"ಇಲ್ಲ...." ನಳಿನಿ ಮುಗ್ಧಳಾಗಿ ತಲೆಯಾಡಿಸಿದಳು.

"ನಿನ್ನಂತಹವರಿಗೇ ಅವರು ಹೇಳುತ್ತಿದ್ದದ್ದು. ಕೇಳಿ ತಿಳಿದುಕೊಳ್ಳಬಾರದೆ?"

"ಅಡಿಗೆ, ತಿಂಡಿ ಮಾಡೋ ಕೆಲಸ ಯಾರಿಗ ಬೇಕಾಗಿದೆ...."

"ಅಚ್ಚುಗಟ್ಟಾಗಿ ಮಾಡಿಕೊಟ್ಟರೆ ತಿಂದು ತೇಗ್ತೀಯೇನೊ ?"

"ಕುಮುದ....ಗಂಗ ಮೊದಲನೆಯ ದರ್ಜೆಯಲ್ಲಿ ತೇರ್ಗಡೆಯಾಗಿದ್ದಾಳೆ...."

ಮಾಧವ ಸಂಭ್ರಮದಿಂದ ಹಜಾರದೊಳಗೆ ಕಾಲಿರಿಸಿದ.

"ನಿಜವಾಗಿ ?"

ಗಂಗ ಕುಳಿತಿದ್ದ ಕುರ್ಚಿಯಿಂದ ತಟಕ್ಕನೆ ಎದ್ದು ನಿಂತುಕೊಂಡಳು. ಅವಳ ಪ್ರಶ್ನೆಯೊಂದಿಗೆ ಅವಳ ದೇಹ ಸೆಟೆದು ನಿಂತುಕೊಂಡಿತು.

ಪೋಲಿಯೊ ಖಾಯಿಲೆ ಬಂದ ಮೇಲೆ ಗಂಗ ಮೊದಲ ಬಾರಿ ನಿಂತು ಕೊಂಡಿರುವುದನ್ನು ನೋಡಿ ಎಲ್ಲರೂ ಕೀಲುಕೊಟ್ಟ ಬೊಂಬೆಗಳಂತೆ ಅವಳ ಕಡೆ ನೋಡಿದರು. ಆಗ ತಾನು ನಿಂತುಕೊಂಡಿದ್ದೇನೆ ಎನ್ನುವ ವಿಷಯ ಗಂಗಳ ಬುದ್ಧಿಗೂ ಹೊಳೆದು ಅವಳೂ ದಿಗ್ಭ್ರಮೆಗೊಂಡಳು.

"ಓ!" ಕುಮುದ ಮಾಧವರಿಬ್ಬರೂ ಒಟ್ಟಾಗಿ ಉದ್ಗರಿಸಿದರು.

ಹನ್ನೆರಡು ವರ್ಷದ ಮಗಳು ನಿಂತುಕೊಂಡಿರುವುದನ್ನು ನೋಡಿ ತಂದೆ ತಾಯಿಗಳು ಸಂಭ್ರಮಪಟ್ಟರು. ಅನಿರೀಕ್ಷಿತವಾಗಿ ಒದಗಿ ಬಂದ ಈ ಸಂತೋಷ ಘಟನೆಯು ಅವರನ್ನು ಪ್ರತಿಮೆಗಳಂತೆ ನಿಲ್ಲಿಸಿತು.

"ಅಮ್ಮಾ....ನಾನು ನಿಂತುಕೊಂಡು ಬಿಟ್ಟಿದೀನಿ....ಯಾರ ಸಹಾಯವೂ ಇಲ್ಲದೆ ನಾನೇ ನಿಂತಿದೀನಿ ಕಣಣ್ಣ !"

ಗಂಗ ಸಂಭ್ರಮದಿಂದ, ಆನಂದಾತಿರೇಕದ ಉತ್ಸಾಹದಿಂದ ಬಡಬಡಿಸಿದಳು. ಕುಮುದ ಧಾವಿಸಿ ಬಂದು ಮಗಳನ್ನು ಅಪ್ಪಿಕೊಂಡಳು. ಮಾಧವ ಮಗಳನ್ನು ಸಮಾಪಿಸಿ ವಾತ್ಸಲ್ಯದಿಂದ ಅವಳ ತಲೆಯನ್ನು ನೇವರಿಸಿದ. ಗೋಪಾಲ, ನಳಿನಿಯರು ಆ ಸುಂದರ ದೃಶ್ಯವನ್ನು ನೋಡಿ ನಲಿಯುವ ಪ್ರೇಕ್ಷಕರಾದರು.

"ನಿಂತುಕೊಂಡರೆ ಎಷ್ಟೊಂದು ಎತ್ತರವಾಗಿ ಕಾಣಿಸ್ತೀಯ ಗಂಗ !"

ನಳಿನಿ ತಂಗಿಯ ಎತ್ತರವನ್ನು ದೂರದಲ್ಲೇ ಕುಳಿತು ಅಳೆದಳು.

"ನಿಂತುಕೊಂಡರೆ ಎಷ್ಟೊಂದು ಚೆನ್ನಾಗಿರತ್ತೆ ಅಲ್ವೆ ಅಣ್ಣ ?"

ಕುಮುದ, ಮಾಧವ, ಗಂಗ ಮೂವರ ಕಣ್ಣಲ್ಲೂ ಕಣ್ಣೀರಿನ ಧಾರೆ !

ಆದರೆ ಅದು ನೋವಿನ ನೀರಲ್ಲ. ನಲಿವಿನಿಂದ ನೃತ್ಯಮಾಡುತ್ತಿದ್ದ ಹೃದಯದಿಂದ ಚಿಮ್ಮಿ ಬಂದ ಆ ನೀರು ಆನಂದಾಶ್ರುವಾಗಿತ್ತು.

ಮೂವರ ಕಣ್ಣೀರೂ ನೆಲದ ಮೇಲೆ ಹರಿದಾಡಿತು. ಉಪ್ಪಿನ ನೀರು, ಕಹಿ ನೀರು ಅದಾಗಿರಲಿಲ್ಲ. ಆ ಕಣ್ಣೀರು ಸಿಹಿ ಜೇನಿನಂತೆ, ಸಕ್ಕರೆಯಂತೆ ಸಿಹಿಯಾಗಿತ್ತು.

ಗಂಗಳಿಗೆ ಹೆಚ್ಚು ಕಾಲ ನಿಂತುಕೊಳ್ಳಲು ಸಾಧ್ಯವಾಗಲಿಲ್ಲ. ಕುರ್ಚಿಯನ್ನು ಹಿಡಿದುಕೊಂಡು ಅದರ ಮೇಲೆ ನಿಧಾನವಾಗಿ ಕುಳಿತುಕೊಂಡಳು.

ಗಂಗಳ ಕಾಲಿನ ಮೇಲೆ ಶಸ್ತ್ರ ಚಿಕಿತ್ಸೆ ನಡೆಸಿದ್ದ ವೈದ್ಯರಿಗೆ ಮಾಧವ ಆ ಸಂತೋಷ ಸುದ್ದಿಯನ್ನು ಕಾಗದದ ಮೂಲಕ ತಿಳಿಸಿದ.

'ಊರುಗೋಲನ್ನು ಕಳುಹಿಸುತ್ತೇನೆ. ಅದನ್ನು ಹಿಡಿದು ನಡೆಯುವುದನ್ನು ನಿಮ್ಮ ಮಗಳು ನಿಧಾನವಾಗಿ ಅಭ್ಯಾಸ ಮಾಡಿಕೊಳ್ಳಲಿ. ನನ್ನ ಕಷ್ಟಕ್ಕೆ ಪ್ರತಿಫಲ ದೊರೆತಿದೆಯೆಂದು ತಿಳಿದು ಸಂತೋಷವಾಯಿತು.' ಎಂದು ಆ ವೈದ್ಯರು ಮರು ಟಪಾಲಿನಲ್ಲೇ ಮಾಧವನಿಗೆ ಕಾಗದ ಹಾಕಿದರು. ಮಾಧವ ಕಾಗದವನ್ನೇ ಗಂಗೆಗೆ ಓದಿ ಹೇಳಿದ.

"ಹಾಗಾದರೆ ನನಗೆ ನಡೆಯುವುದಕ್ಕೂ ಆಗುತ್ತೇನಣ್ಣ ?"

ಗಂಗ ಉತ್ಸಾಹದಿಂದ ಬೆರಳನ್ನು ಬಾಯಿಯಲ್ಲಿಟ್ಟು ಕಚ್ಚಿದಳು.

"ನಡೆಯಲು ಸಹಾಯಕವಾಗುವಂತಹ ಮರದ ಕೋಲುಗಳನ್ನು ಕಳುಹಿಸು ತ್ತಾರಂತೆ...."

"ಎಷ್ಟು ಬೇಗ ಅವರು ಕಳುಹಿಸಿದರೆ ಅಷ್ಟು ಜಾಗ್ರತೆಯಾಗಿ ನಾನು ನಡೆಯುವುದನ್ನು ಕಲಿತುಬಿಡುತ್ತೇನೆ...."

"ನಂಬಿದವರನ್ನು ಖಂಡಿತವಾಗಿ ದೇವರು ಕೈ ಬಿಡುವುದಿಲ್ಲ...."

ಕುಮುದ ಕಾಣದ ದೈವಕ್ಕೆ ಕೈ ಜೋಡಿಸಿದಳು.

"ಕಾಣದ ದೇವರ ಧ್ಯಾನದಲ್ಲಿ ನೀನು ಮೈ ಮರೆತು ಗಂಗೆಯ ಈ ಸ್ಥಿತಿಗೆ ಕಾರಣರಾದ ವೈದ್ಯರನ್ನು ಸಂಪೂರ್ಣವಾಗಿ ಮರೆತುಬಿಡುವುದೆ ?"

ಮಾಧವ ಹೆಂಡತಿಯನ್ನು ವಾಸ್ತವಿಕ ಪ್ರಪಂಚಕ್ಕೆ ಎಳೆದು ತಂದ.

"ನಿಮ್ಮ ಮಾತು ನಿಜ. ಆತನ ಋಣ ನಾವು ಏಳು ಜನ್ಮಕ್ಕೂ ತೀರಿಸ ಲಾರೆವು. ದೇವರೇ ಆತನ ರೂಪಿನಲ್ಲಿ ನಮಗೆ ಸಹಾಯ ಮಾಡಿದ್ದಾನೆ."

ವೈದ್ಯರು ಕಳುಹಿಸುವ ಊರುಗೋಲುಗಳಿಗಾಗಿ ಮನೆಯವರೆಲ್ಲರೂ ದಾರಿ ನೋಡಿದರೂ ಅದರ ಆಗಮನವಾಗಲಿಲ್ಲ. ಎಲ್ಲರಿಗಿಂತಲೂ ತುದಿಗಾಲಿನಲ್ಲಿ ನಿಂತು ಅದರ ನಿರೀಕ್ಷೆ ಮಾಡುತ್ತಿದ್ದವಳೆಂದರೆ ಗಂಗ.

'ಎಂದಿಗೆ ವೈದ್ಯರು ಆ ಕೋಲುಗಳನ್ನು ಕಳುಹಿಸುತ್ತಾರೋ ? ಎಲ್ಲರಂತೆ ಎಷ್ಟು ಜಾಗ್ರತೆಯಾಗಿ ನಾನು ನಡೆಯುವುದನ್ನು ಕಲಿತುಕೊಳ್ಳುವೆನೋ ?'

ಹಗಲಿರುಳೂ ಗಂಗೆಗೆ ಬರಲಿರುವ ಊರುಗೋಲುಗಳ ನಿರೀಕ್ಷೆ ಮಾಡುವುದೇ ಆಯಿತು.

* * * *

ಮಾಧವನ ಮನೆಯಲ್ಲಿ ಬರಲಿರುವ ನವರಾತ್ರಿಯ ಹಬ್ಬಕ್ಕಾಗಿ ಬೊಂಬೆ ಗಳನ್ನು ಕೂರಿಸುವ ಸಂಭ್ರಮ ! ಎರಡು ಬೀರುವಿನ ತುಂಬ ಇದ್ದ ಬಣ್ಣ ಬಣ್ಣದ ಬೊಂಬೆಗಳು ಕಣ್ಣು ತುಂಬುವಂತಿದ್ದವು. ಬೀರುವಿನಿಂದ ಒಂದೊಂದಾಗಿ ಬೊಂಬೆ

ಗಳನ್ನು ತೆಗೆದು ತಾಯಿಯ ಕೈಲಿಡುತ್ತಿದ್ದಳು ನಳಿನಿ. ಅವುಗಳನ್ನು ಬೆಂಚಿನ ಮೇಲೆ ಕುಮುದ ಜೋಡಿಸಿಡುತ್ತಿದ್ದಳು. ಬೊಂಬೆಗಳನ್ನು ಜೋಡಿಸಿಟ್ಟಿದ್ದ ಕೋಣೆಯ ಸುತ್ತಲೂ ಗಂಗ ರಂಗವಲ್ಲಿ ಹಾಕುತ್ತಿದ್ದಳು. ರಂಗವಲ್ಲಿಯ ಬಳ್ಳಿಗಳ ನಡುವೆ ಬೀರಿದ ಹೂವುಗಳಿಗೆ ಗಂಗ ಕೆಂಪು, ನೀಲಿ, ಹಳದಿ ಬಣ್ಣದ ಪುಡಿಯನ್ನು ತುಂಬುವುದರಲ್ಲಿ ಮಗ್ನಳಾಗಿದ್ದಳು. ಪಕ್ಕದಲ್ಲಿ ದೊಡ್ಡ ಪೆಟ್ಟಿಗೆ ಹಿಡಿದು ನಿಂತಿರುವ ತಂದೆಯನ್ನು ಅವಳು ಗಮನಿಸಲಿಲ್ಲ.

"ಗಂಗ.... ಇದೇನು ನೋಡು ಬಾ...."

ಆ ದೊಡ್ಡ ಪೆಟ್ಟಿಗೆಯಲ್ಲಿ ಏನಿರಬಹುದೆಂದು ಗಂಗ ಮನಸ್ಸಿನಲ್ಲೇ ತರ್ಕಿಸಿದಳು. ಆ ಪೆಟ್ಟಿಗೆಯಲ್ಲಿದ್ದ ದೊಡ್ಡ ವಸ್ತು ಏನೆಂದು ಅವಳ ಪುಟ್ಟ ತಲೆಗೆ ಹೊಳೆಯಲಿಲ್ಲ.

"ಹಬ್ಬಕ್ಕಾಗಿ ತಂದೆ ತನಗೇನಾದರೂ ತಂದಿರಬಹುದೆ?"

"ಈ ಪೆಟ್ಟಿಗೆ ಬೊಂಬಾಯಿನಿಂದ ಬಂದಿದೆ. ಈಗ ಹೇಳು ನೋಡೋಣ?"

ತಿಳಿಯುವ ಕುತೂಹಲದಿಂದ ಸುಕ್ಕಾಗಿದ್ದ ಗಂಗಳ ಹಣೆ ಮತ್ತೆ ವಿಶಾಲವಾಯಿತು. ಅವಳ ಮುಖ ಅರಳಿದ ಪುಷ್ಪದಂತೆ ಬಿರಿಯಿತು.

"ಊರುಗೋಲುಗಳನ್ನು ವೈದ್ಯರು ಕಳುಹಿಸಿದ್ದಾರೆ ಅಲ್ವ? ಬೇಗ ಪೆಟ್ಟಿಗೆಯಿಂದ ತೆಗೆದು ನನಗೆ ತೋರಿಸಣ್ಣ...."

ಮಾಧವ ಪೆಟ್ಟಿಗೆಯನ್ನು ತೆಗೆದು ಅದರೊಳಗೆ ನೀಳವಾಗಿ ಮೈ ಚಾಚಿ ಮಲಗಿದ್ದ ಎರಡು ಕೋಲುಗಳನ್ನು ಕೈಗೆ ತೆಗೆದುಕೊಂಡ.

"ಎಲ್ಲಿ ಕೊಡಣ್ಣ. ಈಗಲೆ ಕೋಲುಗಳನ್ನು ಹಿಡಿದುಕೊಂಡು ನಡೆದುಬಿಡ್ತೀನಿ"

ಗಂಗ ಉದ್ವೇಗದಿಂದ ತಂದೆಯನ್ನು ಕೇಳಿದಳು.

"ನೀನು ತಿಳಿದಿರುವಷ್ಟು ಸುಲಭವಲ್ಲ ಗಂಗ. ಯಾವ ಕೆಲಸಕ್ಕೂ ಆತುರ ಪಡಬಾರದು. ಈ ಚಕ್ಕಳದ ಪಟ್ಟಿಯನ್ನು ನಿನ್ನ ತೋಳುಗಳಿಗೆ ತೂರಿಸಿಕೊಂಡು ನಿಧಾನವಾಗಿ ಬೀಳದ ಹಾಗೆ ಕಾಲುಗಳನ್ನು ಕೋಲಿನ ಸಹಾಯದಿಂದ ಮುಂದಕ್ಕೆ ಇಡಬೇಕು...."

ತಂದೆಯ ಸಹಾಯದಿಂದ ಗಂಗ ನಾಲ್ಕಾರು ಹೆಜ್ಜೆಗಳನ್ನಿಡುವಷ್ಟರಲ್ಲಿ ಅವಳಿಗೆ ಬಹಳ ಆಯಾಸವಾಯಿತು. ಮುಖದಲ್ಲಿ ಬೆವರೊಡೆದು, ನಿಶ್ಶಕ್ತಿಯಿಂದ ಕಾಲುಗಳು ನಡುಗಲಾರಂಭಿಸಿದವು.

"ಗಂಗ ಇವತ್ತಿಗೆ ಇಷ್ಟು ಅಭ್ಯಾಸ ಸಾಕು. ಹೆಚ್ಚು ನಡೆದು ಕಾಲಿಗೆ ಆಯಾಸ ಕೊಡಬಾರದೆಂದು ವೈದ್ಯರು ಬರೆದಿದ್ದಾರೆ...."

"ಎಲ್ಲಾ ಊಟಕ್ಕೆ ಬನ್ನಿ...."

ಹಬ್ಬದ ಊಟ ಎಲ್ಲರ ಗಮನವನ್ನೂ ಸೆಳೆಯಿತು.

ಎಲ್ಲರೂ ಸಂಭ್ರಮದಿಂದ ಊಟದ ಮನೆಗೆ ಹೋದರು. ಆದರೆ ಆಪ್ತ ಗೆಳತಿಯಂತಿದ್ದ ಆ ಕೋಲುಗಳಿಂದ ಅಗಲಿರಲು ಗಂಗೆಗೆ ಮನಸ್ಸಾಗಲಿಲ್ಲ. ಆದೇ ತಾನೆ ಜನ್ಮ ಕೊಟ್ಟ ಎಳೆಯ ಕರುವಿನಿಂದ ಅಗಲಲಾರದೆ ಕೂಗಿಕೊಳ್ಳುವ ಹಸುವಿನಂತೆ ಅವಳ ಅಂತರಾತ್ಮ ತಳಮಳಿಸಿತು. ಎಲ್ಲರೂ ಹಜಾರದಿಂದ ಹೊರಟು ಹೋದ ಮೇಲೆ ಗಂಗ ಕೋಲುಗಳಿಗಿದ್ದ ಚಕ್ಕಳದ ಪಟ್ಟಿಯನ್ನು ತೋಳುಗಳಿಗೆ ತೂರಿಸಿಕೊಂಡಳು. ಬಲಗಾಲಿನ ಮೇಲೆ ದೇಹದ ಭಾರ ಬಿದ್ದಾಗ ಅವಳ ದೇಹ ಹಣ್ಣೆಲೆಯಂತೆ ಕಂಪಿಸಿತು. ಆದರೆ ಕೈಯೊಳಗಿದ್ದ ಆ ಮರದ ಕೋಲು ಅವಳ ದೇಹ ಬೀಳದಂತೆ ತಡೆದು ನಿಲ್ಲಿಸಿತು.

ಗಂಗ ನಿಧಾನವಾಗಿ ಹೆಜ್ಜೆಗಳನ್ನಿಡುತ್ತಾ ಊಟದ ಮನೆಯ ಕಡೆ ಹೊರಟಳು. ಅವಳ ದೃಷ್ಟಿ ನೆಲದತ್ತ, ನೆಲದ ಮೇಲೆ ಚಲಿಸುತ್ತಿದ್ದ ಕಾಲುಗಳತ್ತ ನೋಡುತ್ತಿತ್ತು.

ಒಂದು .... ಎರಡು .... ಮೂರು....ನಾಲ್ಕು....ಐದು....ಆರು....ಏಳು.... ಎಂಟನೆಯ ಹೆಜ್ಜೆಗೆ ಗಂಗ ಊಟದ ಮನೆಯ ಬಾಗಿಲಿಗೆ ಬಂದು ನಿಂತಳು. ತಟ್ಟೆಯ ಮುಂದೆ ಕುಳಿತಿದ್ದ ಮಾಧವ ಎವೆಯಿಕ್ಕದೆ, ಉಸಿರು ಬಿಗಿಹಿಡಿದು ಮಗಳ ಸಾಹಸವನ್ನು ನೋಡುತ್ತಿದ್ದ.

ಗೋಪಾಲ ಬಾಯಿಗಿಡುತ್ತಿದ್ದ ತುತ್ತನ್ನು ಅರ್ಧದಲ್ಲಿಯೇ ತಡೆದು ನಿಲ್ಲಿಸಿದ. ನಡೆದು ಬರುತ್ತಿದ್ದ ಗಂಗೆಯನ್ನು ನೋಡುತ್ತಾ ಕೈಯೊಳಗಿದ್ದ ತುತ್ತನ್ನು ಸಂಪೂರ್ಣವಾಗಿ ಅವನು ಮರೆತ.

ಹುಟ್ಟಿದ ಹನ್ನೆರಡು ವರ್ಷಗಳಿಗೆ ಗಂಗ ಕೋಲಿನ ಸಹಾಯದಿಂದ ಹನ್ನೆರಡು ಹೆಜ್ಜೆಯಿಡುವಂತಾದಳು. ಮಾಧವ ಊಟದ ಮನೆಯ ಬಾಗಿಲಿನವರೆಗೂ ನಡೆದು ಬಂದು ಮಗಳಿಗೆ ಕೈ ಕೊಟ್ಟು ಒಳಗೆ ಕರೆದುಕೊಂಡು ಹೋದ. ಖಾಲಿಯಿದ್ದ ತಟ್ಟೆಯ ಮುಂದೆ ಮಗಳನ್ನು ಕೂರಿಸಿದ.

"ಅಣ್ಣ....ಇವತ್ತು ಎಷ್ಟು ದೂರ ನಡೆದುಬಿಟ್ಟೆ ಅಲ್ವಾ? ನಾನು ಚೆನ್ನಾಗಿ ಅಭ್ಯಾಸ ಮಾಡಿದರೆ ಈ ವರ್ಷ ಹೈಸ್ಕೂಲಿಗೆ ಸೇರಿಕೊಳ್ಳಬಹುದಲ್ಲವೆ ?"

ಮನೆಯಲ್ಲಿ ಕುಳಿತು ಕಲಿಯುವುದೆಂದರೆ ಗಂಗೆಗೆ ಎಲ್ಲಿಲ್ಲದ ಬೇಸರ ! ಸಮವಯಸ್ಕರೊಂದಿಗೆ, ಶಾಲೆಯಲ್ಲಿ ಕಲಿಯಬೇಕೆಂಬ ಆಸೆ ಅವಳದು. ಆದರೆ ನಿಲ್ಲಲಾರದೆ, ನಡೆಯಲಾರದೆ ಅವಳು ಆ ಆಸೆಯನ್ನು ಅದುಮಿ ಹಿಡಿದಿದ್ದಳು.

"ಖಂಡಿತವಾಗಿ ಕಾನ್ವೆಂಟಿಗೆ ಸೇರಿಕೊಳ್ಳುವಿಯಂತೆ."

ಬೆಂಕಿಗೆ ತುಪ್ಪಹಾಕಿದಂತೆ ಮಾಧವ ಮಗಳ ಬಯಕೆಗೆ ಪ್ರೋತ್ಸಾಹ ನೀಡಿದ. ಆ ದಿನ ಗಂಗಳ ಜೀವನದಲ್ಲಿ ಚಿರಸ್ಮರಣೀಯವಾದ ದಿನ. ಅಂದು ತೆವಳುತ್ತಿದ್ದ ಗಂಗ ನಡೆಯುವಂತಾದಳು. ಆದರೆ ಅವಳ ನಡಗೆಗೆ ಕೋಲುಗಳ ಆಧಾರದ ಅವಶ್ಯಕತೆ ಇತ್ತು.

"ಕುಮುದಮ್ಮ...."

ಪಾಯಸದ ಪಾತ್ರೆ ಹಿಡಿದು ಸಂಭ್ರಮದಿಂದ ಓಡಾಡುತ್ತಿದ್ದ ಕುಮುದಳಿಗೆ ಹಿತ್ತಿಲ ಬಾಗಿಲ ಕಡೆಯಿಂದ ಬಂದ ಕರೆ ಕೇಳಿಸಿತು.

"ಯಾರು....ಶಾಂತಮ್ಮನೇ....?"

"ಅಲ್ಲ....ನಾನು....ಪ್ರೇಮ...."

"ನಿನ್ನ ಧ್ವನಿಯೂ ನಿಮ್ಮಮ್ಮನ ಧ್ವನಿ ಇದ್ದ ಹಾಗೇ ಇದೆ ಪ್ರೇಮ.... ಬಾ...."

"ಅಮ್ಮ ಇದನ್ನು ನಿಮಗೆ ಕೊಟ್ಟು ಬಾ ಎಂದು ಹೇಳಿದಳು...."

ಪ್ರೇಮ ಡಬ್ಬಿಯನ್ನು ಕುಮುದಳ ಕಡೆ ನೀಡಿದಳು. ಪ್ರೇಮ ಸೀರೆ ಲಂಗಗಳ ನಡುವಣ ಪ್ರಾಯದಲ್ಲಿದ್ದಳು. ತುಂಬಿಕೊಳ್ಳುತ್ತಿದ್ದ ಅವಳ ಮುಖ ಬಿಸಿಲಿಗೆ ಸಿಕ್ಕಿ ರಂಗಾಗಿತ್ತು.

"ಏನು ಕಳುಹಿಸಿದ್ದಾಳೆ ಪ್ರೇಮ, ನಿಮ್ಮಮ್ಮ ?"

"ಅಮ್ಮ ಜಿಲೇಬಿ ಮಾಡಿದ್ದಳು. ಗಂಗೆಗೆ ಕೊಟ್ಟು ಬಾ ಎಂದು ಹೇಳಿ ನಾಲ್ಕು ಜಿಲೇಬಿ ಕಳುಹಿಸಿದ್ದಾಳೆ ಅಷ್ಟೆ...."

ಮನೆಯಲ್ಲಿ ಏನು ಸಿಹಿ ತಿಂಡಿ ಮಾಡಿದರೂ ಪ್ರೇಮಳ ತಾಯಿ ಶಾಂತಮ್ಮ ಗಂಗೆಗೆ ಕೊಡುವುದನ್ನು ಮರೆಯುತ್ತಿರಲಿಲ್ಲ. ಸಿಹಿ ತಿಂಡಿಯ ಹೆಸರು ಕೇಳಿದರೇ ಸಾಕು ಗಂಗೆಯ ಬಾಯಲ್ಲಿ ನೀರು ತೊಟ್ಟಿಕ್ಕುತ್ತಿತ್ತು. ಏನಿಲ್ಲದಿದ್ದರೂ ಕೊನೆಗೆ ಚೂರು ಬೆಲ್ಲವನ್ನು ದವಡೆಯ ಉಗ್ರಾಣದಲ್ಲಿ ಜೋಪಾನವಾಗಿಟ್ಟು, ಅದರ ರಸ ಹೀರುವುದರಿಂದಲೇ ಅವಳು ಸ್ವರ್ಗಸುಖವನ್ನನುಭವಿಸುತ್ತಿದ್ದಳು.

ಕುಮುದ ಪ್ರೇಮಳ ಕೈಯಿಂದ ಡಬ್ಬಿಯನ್ನು ತೆಗೆದುಕೊಂಡು, ಅದರ ಮುಚ್ಚಳವನ್ನು ತೆಗೆದು ನೋಡಿದಳು. ವರ್ತುಲಾಕಾರದ, ಸಿಹಿ ಜೇನು ತುಂಬಿ ಊದಿ ನಿಂತಿದ್ದ ಜಿಲೇಬಿಗಳಿಗಿದ್ದ ಪಾತ್ರೆಯನ್ನು ಒಳಗೆ ತೆಗೆದುಕೊಂಡು ಹೋಗುತ್ತಾ ಕುಮುದ ಪ್ರೇಮಳನ್ನು ಹಾಸ್ಯಮಾಡಿದಳು.

"ಮಾಡಿದ್ದನ್ನೆಲ್ಲಾ ನಿಮ್ಮಮ್ಮ ನಮ್ಮನೇಗೆ ಕಳುಹಿಸಿರುವ ಹಾಗಿದೆ...."

ಆ ಡಬ್ಬಿಯನ್ನು ಖಾಲಿಮಾಡಿ, ಅದರ ತುಂಬಾ ಸಕ್ಕರೆ ಒಬ್ಬಟ್ಟು ತುಂಬಿ ಪ್ರೇಮಳ ಕೈಲಿಟ್ಟಳು ಕುಮುದ.

ಗಡಿಯಾರದ ಸಣ್ಣ ಮುಳ್ಳು ಹತ್ತರ ಮೇಲಿರುವುದನ್ನು ನೋಡಿ ಕುಮುದ ಮಕ್ಕಳಿಗೆ ತಟ್ಟೆ ಹಾಕಿದಳು. ಶಾಲೆಗೆ ಹೋಗುವ ಅವಸರವಿಲ್ಲದಿದ್ದರೂ ಎಲ್ಲರಿಗಿಂತ ಮೊದಲು ತಟ್ಟೆಯ ಮುಂದೆ ಗಂಗ ಪ್ರತಿಷ್ಠಿತಳಾದಳು. ತಾಯಿಯು ನಾಲ್ಕನೆಯ ಬಾರಿ ಕೂಗಿದಾಗ ಕನ್ನಡಿಯ ಮುಂದೆ ನಿಂತು ಶೃಂಗರಿಸಿಕೊಳ್ಳುತ್ತಿದ್ದ ನಳಿನಿ ಅಡಿಗೆ ಮನೆಗೆ ಧಾವಿಸಿ ಬಂದಳು.

"ರಮೇಶ ಎಲ್ಲಿ ಹೋದ್ನೆ ನಳಿನಿ ? ಹತ್ತು ಗಂಟೆ ಹೊಡೆದುಹೋಯ್ತು. ಇನ್ನೂ ಊಟ ಮಾಡಿಕೊಂಡು ಅವನು ಸ್ಕೂಲು ಸೇರೋದು ಯಾವಾಗ ?"

ತಟ್ಟೆಗಿನ್ನೂ ತಾಯಿ ಬಡಿಸದಿರುವುದನ್ನು ನೋಡಿ ನಳಿನಿ ಮತ್ತೆ ರೂಮಿನ ಕಡೆ ಓಡಿದಳು.

"ಪುನಃ ಎಲ್ಲಿಗೆ ಓಡಿ ಹೋಗ್ತಾ ಇದೀಯಾ ? ಕಾಲೇಜಿಲ್ಲವೇನೂ ?"

"ಬಡಿಸ್ತಾ ಇರಮ್ಮ....ಅಷ್ಟರಲ್ಲಿ ಪುಸ್ತಕ ಜೋಡಿಸಿಟ್ಟು ಬರುತ್ತೇನೆ...."

"ರಮೇಶಾ...."

"ಬಂದ್ಬಿಟ್ಟೆ ಬಡಿಸ್ತಾ ಇರಮ್ಮ...."

ರಮೇಶನ ಧ್ವನಿ ಹಿಂದುಗಡೆಯಿಂದ ಕೇಳಿ ಬಂದಾಗ ಅವನು ಪದ್ಮಾವತಮ್ಮನವರ ಮನೆಯಲ್ಲಿದ್ದಾನೆಂದು ಕುಮುದಳಿಗೆ ಖಚಿತವಾಯಿತು.

"ಇಪ್ಪತ್ತು ನಾಲ್ಕು ಘಂಟೆಯೂ ಅವರ ಮನೆಯಲ್ಲಿ ಸಾಯ್ತಾನೆ. ಆ ಪೋಲಿ ಶ್ಯಾಮನಿಗೂ ಇವನಿಗೂ ಒಂದು ಕತ್ತಿನಲ್ಲಿ ಪ್ರಾಣ. ಅವನಿಗೆ ವಿದ್ಯೆಯಿಲ್ಲ, ಬುದ್ಧಿಯಿಲ್ಲ, ಮೂರು ಹೊತ್ತೂ ಬುಗುರಿ ಆಡೋದು. ಅವನ ಸಹವಾಸ ಮಾಡಿ ರಮೇಶ ಹಾಳಾಗಿ ಹೋದ...."

ಕುಮುದ ಸಿಟ್ಟಿನ ಆವೇಗದಲ್ಲಿ ಕೈಯೊಳಗಿದ್ದ ಅನ್ನದ ತಪ್ಪಲೆಯನ್ನು ನೆಲದ ಮೇಲೆ ಕುಕ್ಕಿದಳು.

ಹೊಗೆಯಾಡುತ್ತಿದ್ದ ಅನ್ನಕ್ಕೆ ಕೈ ಹಾಕಿ ಗಂಗ 'ಹಾ' ಎಂದಳು. ಅವಳು ಸರ್ಪ ಮುಟ್ಟಿದವಳಂತೆ ತನ್ನ ಕೈಯನ್ನು ಹಿಂದಕ್ಕೆಳೆದುಕೊಂಡು ಬಿಸಿತಗುಲಿದ ಬೆರಳುಗಳನ್ನು ಬಾಯೊಳಗಿಟ್ಟುಕೊಂಡು ಚೀಪಿದಳು.

"ಸ್ವಲ್ಪ ಅನ್ನ ಆರಲಿ. ನಿನಗೇನು ಅವಸರ ? ನೀನೇನು ಸ್ಕೂಲಿಗೆ ಹೋಗಬೇಕೇನು ?"

ಕುಮುದ ಉರಿಯುತ್ತಿದ್ದ ಮನಸ್ಸಿನಿಂದ ಬಂದ ಸಿಟ್ಟಿನ ಕಿಡಿಯನ್ನು ಗಂಗಳ ಮೇಲೆ ಎಸೆದಳು.

"ನಾನು ಸ್ಕೂಲಿಗೆ ಹೋಗದಿದ್ದರೇನಂತೆ? ಮನೆಯಲ್ಲೇ ಓದಿಕೊಳ್ತಾ ಇಲ್ವೇನು? ಮುಂದಿನ ವರ್ಷ ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಕುಳಿತು ಕೊಳ್ತೀನಿ....?"

ತಾಯಿಯ ಮಾತಿಗೆ ಗಂಗಳ ಮನಸ್ಸು ನೊಂದಿತು. ಆದರೂ ಛಲದ ಮಾತು ಅವಳ ಬಾಯಿಂದ ಹೊರಬಿದ್ದಿತು.

ನಳಿನಿ ಸೀರೆಯ ನೆರಿಗೆಗಳು ಸುಕ್ಕಾಗದಂತೆ ಎಚ್ಚರಿಕೆಯಿಂದ ಚಾಪೆಯ ಮೇಲೆ ಕುಳಿತುಕೊಂಡು ತಟ್ಟೆಯನ್ನು ಹತ್ತಿರಕ್ಕೆಳೆದು ಕೊಂಡಳು. ಅಕ್ಕಂದಿರು ಮೊಸರನ್ನದ ರುಚಿ ಸವಿಯುತ್ತಿದ್ದಾಗ, ರಮೇಶ ಹಿತ್ತಿಲ ಬಾಗಿಲನ್ನು ತಳ್ಳಿ ಕೊಂಡು ಏದುತ್ತಾ ಓಡಿ ಬಂದ.

ಆಡುತ್ತಿದ್ದ ರಮೇಶನ ಮೈ ಬೆವರಿ, ಎದೆಯ ಭಾಗದ ಶರಟು ಅವನ ಮೈಗೆ ಅಂಟಿಕೊಂಡಿತ್ತು. ಕೆದರಿದ್ದ ಅವನ ತಲೆ ಕೂದಲುಗಳು ಅಂಕೆ ತಪ್ಪಿ ಹಾರಾಡುತ್ತಿದ್ದವು. ಹಣೆಯ ಮೇಲೆ ಹರಿದು ಬರುತ್ತಿದ್ದ ಬೆವರನ್ನು ಎಡಗೈಯಲ್ಲಿ ಒರಸುತ್ತಾ ಅಡಿಗೆ ಮನೆಗೆ ಓಡಿ ಬಂದ ರಮೇಶ ತಟ್ಟೆಯ ಮುಂದೆ ದೊಪ್ಪನೆ ಕುಕ್ಕರಿಸಿಕೊಂಡ.

"ಅಮ್ಮಾ, ಬಡಿಸು....ಬಡಿಸು....ಬಡಿಸಮ್ಮ"

ರಮೇಶ ತಾಯಿಯನ್ನು ಅವಸರಪಡಿಸಿದ. ತಾಯಿ ತಟ್ಟೆಗೆ ಹಾಕಿದ್ದುದನ್ನು ರಮೇಶ ಕಲಸಿ ನುಂಗಿದ. ಅವನ ಊಟ ಅರೆ ಕ್ಷಣದಲ್ಲಿ ಮುಗಿಯಿತು. ಅವನು ತಟ್ಟೆಗೆ ಒಂದು ಲೋಟ ನೀರನ್ನು ಬಗ್ಗಿಸಿ ಕೈ ತೊಳೆದುಕೊಂಡು ಮೇಲೆದ್ದ. ನಳಿನಿ ಕೊನೆಯ ತುತ್ತನ್ನು ಬಾಯೊಳಗಿಡುತ್ತಿದ್ದಾಗ ರಮೇಶ ಮತ್ತೆ ಅಡಿಗೆ ಮನೆಯ ಬಾಗಿಲ ಬಳಿ ಪ್ರತ್ಯಕ್ಷನಾದ.

ಅವಸರದಲ್ಲಿ ಸಿದ್ಧವಾಗಿದ್ದ ರಮೇಶನ ಉಡುಪಿನ ಅವ್ಯವಸ್ಥೆಯನ್ನು ನೋಡಿ ಕುಮುದಳಿಗೆ ಸಿಟ್ಟಿನಲ್ಲೂ ನಗು ಬಂತು. ಎಡಕ್ಕೆ ತೆಗೆದಿದ್ದ ಅವನ ಬೈತಲೆ, ತಲೆಯ ಹಿಂಬಾಗಕ್ಕೆ ಹೋಗುತ್ತಾ ಹೋಗುತ್ತಾ ಬಲತುದಿಯನ್ನು ಮುಟ್ಟಿ ಅಂತ್ಯಗೊಂಡಿತ್ತು. ಚಡ್ಡಿಯೊಳಗೆ ತುರುಕಿದ್ದ ಶರಟಿನ ಅರ್ಧ ಭಾಗ ಹೊರಗೆ ತಲೆ ಹಾಕಿ ಇಣುಕುತ್ತಿತ್ತು. ಬಟ್ಟೆಯ ಚೀಲದೊಳಗೆ ಹಾಕಿದ್ದ ಅವನ ಪುಸ್ತಕ ಗಳು ಕಸದ ರಾಶಿಯಂತೆ ಕುಳಿತಿದ್ದವು.

"ನಾನು ಸ್ಕೂಲಿಗೆ ಹೋಗ್ತೀನಿ ಕಣಮ್ಮ...."

"ಹೋಗ್ತೀನಿ ಎಂದು ಹೇಳಬಾರದು ರಮೇಶ. ಹೋಗಿ ಬರ್ತೀನಿ ಎಂದು ಹೇಳಿ ಹೋಗಬೇಕೆಂದು ಸಾವಿರ ಸಲ ನಿನಗೆ ಹೇಳಿದ್ದೇನೆ...."

ತಾಯಿಯ ಮಾತು ಮುಗಿಯುವುದರಲ್ಲಿ ರಮೇಶ ಸ್ಕೂಲಿನ ದಾರಿ ಹಿಡಿದು ಓಡುತ್ತಿದ್ದ.

"ಬೇಗ ಊಟ ಮಾಡಿ ಏಳಬಾರದೆ ನಳಿನಿ. ಇಷ್ಟು ಹೊತ್ತಿಗಾಗಲೇ ರಮೇಶ ಸ್ಕೂಲಿನಲ್ಲಿರುತ್ತಾನೋ ಏನೋ ?"

ನಳಿನಿ ಊಟ ಮುಗಿಸಿ ಮೇಲೇಳುವ ಮನಸ್ಸು ಮಾಡಿದಳು. ನಳಿನಿ ಕನ್ನಡಿಯ ಮುಂದೆ ನಿಂತು, ಮುಖಕ್ಕೆ ಸ್ವಲ್ಪ ಪೌಡರನ್ನು ಹಾಕಿಕೊಂಡು, ಒಂದು ಬಾರಿ ತನ್ನ ಮುಖದ ಅಂದಚೆಂದಗಳ ಸಿಂಹಾವಲೋಕನ ಮಾಡಿ ಕಾಲೇಜಿಗೆ ಹೊರಟಳು.

ನಳಿನಿ ಹೆಚ್ಚು ಎತ್ತರವಾಗಿ ಬೆಳೆಯದಿದ್ದರೂ, ಅವಳ ದಪ್ಪನೆಯ ದೇಹ ಕಣ್ಣು ತುಂಬುವಂತಿತ್ತು. ಬೇಗ ಹೆಜ್ಜೆಹಾಕಿ ನಡೆದರೆ ಅವಳ ದೇಹಕ್ಕೆ ಬಹಳ ಆಯಾಸವಾಗುತ್ತಿತ್ತು. ಕಾಲೇಜು ಹೆಚ್ಚು ದೂರದಲ್ಲಿಲ್ಲದಿದ್ದರೂ ಅವಳು ಬಸ್ಸಿನಲ್ಲೇ ಹೋಗಿ ಬರುತ್ತಿದ್ದಳು.

ಅಕ್ಕ, ತಮ್ಮ ಇಬ್ಬರೂ ಹೊರಟು ಹೋದ ಮೇಲೆ ಗಂಗಳ ಹೃದಯದ ಅಂತರಾಳದಿಂದ ನಿಟ್ಟುಸಿರೊಂದು ಹೊರಹೊಮ್ಮಿತು.

ಊಟ ಮುಗಿದಿದ್ದರೂ ತಟ್ಟೆಯ ಮುಂದೆ ಕೈ ತೊಳೆದು ಕುಳಿತಿದ್ದ ಮಗಳನ್ನು ನೋಡಿ ಕುಮುದಳಿಗೆ ಆಶ್ಚರ್ಯವಾಯಿತು. ಅವಳ ತಗ್ಗಿದ ತಲೆ, ಪೆಚ್ಚುಬಿದ್ದ ಮುಖವನ್ನು ನೋಡಿ ಕುಮುದಳ ಮನಸ್ಸು ಚಿಂತೆಯ ಮನೆ ಹೊಕ್ಕಿತು.

"ಗಂಗ....ಹುಷಾರಾಗಿದೀಯಾ ತಾನೆ ?"

"ಹುಂ. ಅಮ್ಮ ನಾನು ಯಾವತ್ತಮ್ಮ ಎಲ್ಲರ ಹಾಗೆ ಸ್ಕೂಲಿಗೆ ನಡೆದುಕೊಂಡು ಹೋಗೋದು ?"

ಬಾಗಿಲ ಬಳಿ ನಿಂತಿದ್ದ ಮಾಧವ ಮಗಳ ಪ್ರಶ್ನೆಗೆ ಉತ್ತರಕೊಟ್ಟ.

"ನೀನು ಕಾಲೇಜಿಗೆ ಹೋಗುವಿಯಂತೆ ಗಂಗ."

"ನಿಜವಾಗಿ...."

"ಖಂಡಿತವಾಗಿ ನಿನ್ನನ್ನು ಗಾಡಿಯಲ್ಲಿ ಕಳುಹಿಸುವ ಏರ್ಪಾಡು ಮಾಡುತ್ತೇನೆ.

"ಅಲ್ಲಿ ಕೋಲಿನ ಸಹಾಯದಿಂದ ನೀನು ಓಡಾಡಬಲ್ಲೆ ಎಂಬ ಭರವಸೆ ನನಗಿದೆ."

ಗಂಗ ತನ್ನ ಬಳಿಯಲ್ಲೇ ಮಲಗಿ ನಿದ್ರಿಸುತ್ತಿದ್ದ ಕೋಲುಗಳನ್ನು ಕೈಯ್ಯಲ್ಲಿ ಹಿಡಿದು ಅದರ ಆಸರೆಯಲ್ಲಿ ನಿಂತುಕೊಂಡಳು.

"ಗಂಗ....ಪ್ರಾರಂಭದಲ್ಲೇ ಹೆಚ್ಚು ಕಾಲ ಕೋಲೂರಿ ನಿಂತು ನಿನ್ನ ಕಾಲು ಗಳಿಗೆ ಶ್ರಮ ಕೊಡಬೇಡ...."

ಕುಮುದ ಮಗಳನ್ನು ಎಚ್ಚರಿಸಿದಳು.

ಹೆಜ್ಜೆ ಮುಂದೆ ಸರಿದಂತೆಲ್ಲಾ, ಕೋಲುಗಳು ನೆಲವನ್ನು ಮುತ್ತಿಟ್ಟಾಗ ಲೆಲ್ಲಾ ಶಬ್ದವಾಗುತ್ತಿತ್ತು. ಮನೆಯ ನಿಶ್ಶಬ್ದತೆಯ ಹಿನ್ನೆಲೆಯಲ್ಲಿ ಆ ಶಬ್ದ ಕೇಳಿ ಬರುತ್ತಿತ್ತು.

* * * *

ವಿಕ್ರಮ ಆ ಬೀದಿಯಲ್ಲೆಲ್ಲಾ ಹೆಸರುವಾಸಿಯಾದ ಹುಡುಗನಾಗಿದ್ದ. ಮಂಡ್ಯದ ಪುಂಡು ಹುಡುಗರ ಗುಂಪಿಗೆಲ್ಲಾ ಅವನೇ ನಾಯಕ. ಯಾರ ಮನೆಯ ಮೇಲಾದರೂ ಕಲ್ಲು ಎಸೆಯಬೇಕಾಗಿದ್ದರೆ, ಇತರರ ಮನೆಯ ಗಿಡಗಳಲ್ಲಿರುವ ರಸ ತುಂಬಿದ ಹಣ್ಣುಗಳನ್ನು ಕಿತ್ತು ಹೊಟ್ಟೆಗೆ ಸೇರಿಸಬೇಕಾಗಿದ್ದರೆ, ದಾರಿಯಲ್ಲಿ ಹೋಗುವ ಹೆಣ್ಣು ಮಕ್ಕಳನ್ನು ರೇಗಿಸಬೇಕಾಗಿದ್ದರೆ ಪುಂಡರಿಗೆ ಅನುಮತಿ ನೀಡ ಬೇಕಾಗಿದ್ದವನು ವಿಕ್ರಮನೇ! ಹೆಚ್ಚು ಎತ್ತರವಿಲ್ಲದ, ಬೊಜ್ಜು ಬೆಳೆದ ಅವನ ಗಿಡ್ಡನೆಯ ದೇಹ ಹದಿನೆಂಟು ಸಂವತ್ಸರಗಳನ್ನು ನೋಡಿದ್ದರೂ ವಿಕ್ರಮ ಮಿಡಲ್ ಸ್ಕೂಲ್ ದಾಟಿ ಮುಂದೆ ಹೋಗಬಾರದೆಂದು ಮನಸ್ಸು ಮಾಡಿಬಿಟ್ಟಿದ್ದ.

ಕುಮುದ ಮನೆಯ ಮುಂದೆ ಬೆಳೆದು ನಿಂತಿದ್ದ ಮಲ್ಲಿಗೆಯ ಬಳ್ಳಿಯಲ್ಲಿದ್ದ ಹೂವುಗಳನ್ನು ಬಿಡಿಸುತ್ತಿದ್ದಾಗ ಸೂಟುಧಾರಿಯೊಬ್ಬನನ್ನು ನೋಡಿದಳು.

ಹಿಂದೆ ಎಲ್ಲಿಯೋ ನೋಡಿದ ನೆನಪು!

ನೋಡಿ ಮಾತನಾಡಿಸಿದ ನೆನಪು!

ಪರಿಚಿತ ಮುಖ ಅದು ಅವಳಿಗೆ!

ಎಲ್ಲಿ? ಯಾವಾಗ? ಯಾರು?

ಕ್ಷಣಕಾಲ ನಿಂತು ತಲೆ ಕೆರೆದಳು ಕುಮುದ.

ಉಹುಂ....ಆತ ಯಾರೆಂದು ಅವಳ ಬುದ್ಧಿಗೆ ಹೊಳೆಯಲಿಲ್ಲ.

ಅವಳ ಸಮಸ್ಯೆಯನ್ನು ಆ ಸೂಟುಧಾರಿಯೇ ಬಗೆಹರಿಸಿದ.

"ನಾನು....ವಿಕ್ರಮ....ನಿಮಗೆ ಗೊತ್ತಾಗಲಿಲ್ಲವೆ....?"

ಕುಮುದಳ ಸುಕ್ಕುಗಟ್ಟಿದ ಹಣೆ ವಿಸ್ತರಿಸಿತು.

"ಏನೋ ವಿಕ್ರಮ....ಗುರುತು ಸಿಕ್ಕದ ಹಾಗೆ ಆಗಿದ್ದೀಯಲ್ಲಪ್ಪಾ ?"

"ಹುಂ....ಹುಂ...."

ವಿಕ್ರಮ ಹಲ್ಲುಕಿರಿದು ಮುಂದೆ ಸಾಗಿದ.

ಠೀವಿಯಿಂದ ನಡೆದು ಮುಂದೆ ಹೋಗುತ್ತಿದ್ದರೂ, ಅವನು ಉಗುಳುತ್ತಿದ್ದ ಸೀಗರೇಟಿನ ಹೊಗೆ ಅವನ ಬೆನ್ನ ಹಿಂದೆ ಕಾಣಿಸುತ್ತಿತ್ತು. ಎಂಟು ವರ್ಷಗಳ ಹಿಂದೆ ನಡೆದ ಘಟನೆಯೊಂದು ಕುಮುದಳ ಮುಂದೆ ಸುಳಿಯಿತು.

* * * *

ಒಂದು ದಿನ ಕುಮುದ ರೂಮಿನಲ್ಲಿದ್ದ ದೊಡ್ಡ ಮೇಜಿನ ಮೇಲೆ ಮಕ್ಕಳ ಬಟ್ಟೆಗಳನ್ನೆಲ್ಲಾ ಹಾಕಿಕೊಂಡು ಇಸ್ತ್ರಿ ಮಾಡುತ್ತಿದ್ದಳು. ಮನೆಯಲ್ಲಿದ್ದ ದೊಡ್ಡ ಬೇವಿನ ಮರದ ನೆರಳಿನಲ್ಲಿ ಮಕ್ಕಳೆಲ್ಲಾ ಆಟವಾಡುತ್ತಿದ್ದರು. ಅವರ ಆಟವನ್ನು ನೋಡುತ್ತಾ ಕಲ್ಲು ಬೆಂಚಿನ ಮೇಲೆ ಗಂಗ ಕುಳಿತಿದ್ದಳು. ಮಕ್ಕಳೊಂದಿಗೆ ವಿಕ್ರಮನೂ ಇದ್ದ. ಎದುರು ಮನೆಗೆ ಹೊಸದಾಗಿ ಬಂದಿದ್ದ ಕುಟುಂಬಕ್ಕೆ ಸೇರಿದ್ದ ಹತ್ತು ವರ್ಷದ ಹುಡುಗನೊಬ್ಬ ಬೀಸಿ ಚೆಂಡನ್ನು ಎಸೆದ.

ಆಟದಲ್ಲಿ ಆಸಕ್ತಿಯಿಟ್ಟು ಸಮೀಪದಲ್ಲಿ ಕುಳಿತಿದ್ದ ಗಂಗೆಯ ತೊಡೆಯ ಮೇಲೆ ಅವನು ಬೀಸಿ ಎಸೆದ ಚೆಂಡು ಬಂದು ಬಿತ್ತು.

"ನಾನು ಚೆಂಡು ಕೊಡೋದಿಲ್ಲ...."

ಚೆಂಡಿಗಾಗಿ ಆ ಹುಡುಗ ಗಂಗಳ ಬಳಿ ಬಂದು ನಿಂತಾಗ ಅವಳು ಚೆಂಡನ್ನು ಮುಷ್ಠಿಯಲ್ಲಿ ಹಿಡಿದು ತಲೆಯಲುಗಿಸಿದಳು.

"ಕುಂಟಿಯಾದರೂ ಎಷ್ಟು ತಲೆಹರಟೆ ನಿನಗೆ!"

ಆ ಹುಡುಗ ಸಿಟಿದು ನಿಂತು ಗಂಗೆಯನ್ನು ಆ ಗುಂಪಿನೆದುರಿನಲ್ಲಿ ಅವಮಾನಿಸಿದ. ದುಃಖದಿಂದ, ಅವಮಾನದಿಂದ ಗಂಗೆಯ ಕಣ್ಣುಗಳಲ್ಲಿ ನೀರಾಡಿತು.

ವಿಕ್ರಮ ಗಂಗಳ ಸಮೀಪದಲ್ಲಿ ನಿಂತು ಸಂತೈಸುತ್ತಿದ್ದ ನಳಿನಿಯನ್ನು ಕೇಳಿದ.

"ಗಂಗೆಯ ಕಾಲಿಗೆ ಏನಾಗಿದೆ ?"

"ಪೋಲಿಯೋ ಕಾಯಿಲೆಯಿಂದ ಅವಳ ಬಲಗಾಲಿಗೆ ಶಕ್ತಿಯಿಲ್ಲ...."

ಮಕ್ಕಳ ಮಾತುಗಳನ್ನು ಕೇಳಿ ಕುಮುದ ಮಾಡುತ್ತಿದ್ದ ಕೆಲಸವನ್ನು ನಿಲ್ಲಿಸಿ ಆ ಸ್ಥಳಕ್ಕೆ ಧಾವಿಸಿ ಬಂದಳು.

ಎಂಟು ವರ್ಷದ ಮಗಳು ಎದೆಯೊಡೆಯುವಂತೆ ಅಳುತ್ತಿರುವುದನ್ನು ಕಂಡು ಕುಮುದಳಿಗೆ ಗಾಬರಿಯಾಯಿತು.

"ಮಧುಸೂದನ.... ಇನ್ನೊಂದು ದಿನ ಗಂಗೆಯ ತಂಟೆಗೆ ಬಂದರೆ ನಿನ್ನನ್ನು ಸಿಗಿದು ಈ ಬೇವಿನ ಮರಕ್ಕೇ ಕಟ್ಟಿ ಹಾಕಿಬಿಡ್ತೀನಿ. ಹುಷಾರ್...."

ವಿಕ್ರಮ ಆ ಹುಡುಗನ ಶರಟನ್ನು ಹಿಡಿದು ಅವನಿಗೆ ಬೆದರಿಕೆ ಹಾಕುತ್ತಿದ್ದಾಗ ಕುಮುದ ಬಂದಳು.

"ನಿನ್ನ ಹೆಸರೇನಪ್ಪ ?"

"ಮಧುಸೂಧನ...." ಗಂಗಳನ್ನು ಅವಮಾನಿಸಿದ್ದ ಹುಡುಗ ಜಂಭದಿಂದ ತನ್ನ ನಾಮಧೇಯವನ್ನು ಹೇಳಿಕೊಂಡ.

"ದೇವರು ನಿನಗೆ ನನಗೆ ಕೊಟ್ಟಂತೆ ಗಂಗೆಯ ಒಂದು ಕಾಲಿಗೆ ಶಕ್ತಿಯನ್ನು ಕೊಡಲಿಲ್ಲ. ಅವಳಿಗೆ ಈಗಾಗಲೇ ಅದರ ವಿಷಯವಾಗಿ ಬಹಳ ಬೇಸರವಾಗಿದೆ. ಅವಳ ಮನಸ್ಸನ್ನು ನೀನು ಹೆಚ್ಚು ನೋಯಿಸಬೇಡ...."

"ನೀನು ಹೇಳಿದ ಮಾತಿಗೆ ನಿನಗೇ ನಾಚಿಕೆಯಾಗಬೇಕು. ಗಂಗೆಯ ಕಾಲು ಹಿಡಿದು ಕ್ಷಮೆ ಬೇಡು...."

ವಿಕ್ರಮ ಮಧುಸೂಧನನನ್ನು ಗಂಗೆಯ ಕಡೆ ರಭಸದಿಂದ ತಳ್ಳಿದ. ಸಾಕಷ್ಟು ತನ್ನ ನಡತೆಯಿಂದ ಪಶ್ಚಾತ್ತಾಪ ಹೊಂದಿದ್ದ ಮಧುಸೂಧನನ ಕಣ್ಣಿನಲ್ಲಿ ನೀರಾಡಿತು. ನಮ್ರತೆಯಿಂದ ಕೈ ಜೋಡಿಸಿ ಗಂಗೆಯ ಕ್ಷಮೆ ಬೇಡಿದ.

* * * *

ಅಂದಿನಿಂದ ಯಾರೂ ಗಂಗೆಯ ಕಾಲುಗಳ ವಿಷಯವಾಗಿ ಹಾಸ್ಯಮಾಡಲಿಲ್ಲ. ಅದಕ್ಕೆ ಕಾರಣ ವಿಕ್ರಮ. ಅವನು ಸುತ್ತಮುತ್ತ ಇದ್ದರೆ ಹುಡುಗರು ಕಾಳಸರ್ಪ ನೋಡಿದವರಂತೆ ನಡುಗುತ್ತಿದ್ದರು.

ಪೋಲಿಯೋ ಖಾಯಿಲೆಯ ವಿಷಯದಲ್ಲಿ ಪ್ರವೀಣರಾಗಿರುವ ವೈದ್ಯರೊಬ್ಬರು ಅಮೇರಿಕಾದಿಂದ ಮದ್ರಾಸಿಗೆ ಬಂದಿರುವರೆಂಬ ವರ್ತಮಾನವನ್ನು ತಿಳಿದು ಮಾಧವ ಹೆಂಡತಿ ಮಗಳೊಡನೆ ಪ್ರಯಾಣಕ್ಕೆ ಸಿದ್ಧನಾದ.

ಕುಂಟುತ್ತಾ ನಡೆಯುವ ಮಗಳ ಕಾಲನ್ನು ಅವರಿಗೆ ತೋರಿಸುವ ಸಲುವಾಗಿ ಮಾಧವ ಪ್ರಯಾಣ ಬೆಳಸಿದ.

ಮಂಡ್ಯದ ರೈಲ್ವೆ ನಿಲ್ದಾಣದಲ್ಲಿ ಬರಲಿರುವ ರೈಲಿಗಾಗಿ ಮಾಧವ ಹೆಂಡತಿ ಮಗಳೊಡನೆ ಕಾದು ನಿಂತ. ರೈಲಿನ ಸದ್ದು ಕೇಳಿಸಿದಾಗ ಗಂಗ ಕೋಲೂರಿ ಎದ್ದು ನಿಂತುಕೊಂಡಳು.

"ಗಂಗಮ್ಮನೋರು....ನಡೀತಾರಾ ?"

ಪರಿಚಿತ ಧ್ವನಿ ಕೇಳಿಸಿದಾಗ ಮೂವರೂ ಹಿಂತಿರುಗಿದರು.

ಮುಳ್ಳು ಮುಖದ ರಾಮು ಹಿಂದೆ ನಿಂತು ಹಲ್ಲು ಕಿರಿಯುತ್ತಿದ್ದ. ನಡೆಯ ಲಾರದ, ನಿಲ್ಲಲಾರದ ಮಗುವನ್ನು ಹೊತ್ತು ಶಾಲೆಗೆ ಹೋಗುತ್ತಿದ್ದುದರ ನೆನಪು ಅವನಿಂದ ಮರೆಯಾಗಿ ಹೋಗಿರಲಿಲ್ಲ. ನಿಂತುಕೊಂಡಿರುವ ಗಂಗೆಯನ್ನು ಗುರುತಿಸಲು, ಕಂಡ ದೃಶ್ಯವನ್ನು ಸರಿಯಾಗಿ ಗ್ರಹಿಸಲು ರಾಮುನಿಗೆ ಕೆಲವು ನಿಮಿಷಗಳು ಬೇಕಾದವು. ಮನಸ್ಸಿಗಾದ ಆನಂದವನ್ನು ಮುಖದ ಮೇಲೆ ರಾಮು ತೋರಿಸಿದ. ಅವನ ಕಪ್ಪು ಮುಖವು ಆ ದೊಡ್ಡ ನಗುವಿನಿಂದ ಹರಿದು ಹೋಗು ವಂತಿತ್ತು. ಪ್ರಶ್ನಾರ್ಥಕ ಚಿಹ್ನೆ ಹಾಗೂ ಸಂತೋಷದ ನಗು ಇವುಗಳ ಸಮ್ಮಿಳನ ದಿಂದಾದ ಶಬ್ದವನ್ನು ರಾಮು ಬಾಯಿಂದ ಹೊರಡಿಸಿದ.

ಪಕ್ಕದಲ್ಲಿ ಸೂಟುಧಾರಿಗಳೊಬ್ಬರಿಗೆ ರಾಮು ಗಂಗೆಯ ವಿಷಯವನ್ನು ಪಿಸು ಗುಟ್ಟಿದ. ನಿಧಾನವಾಗಿ ನಡೆದು ಬಂದು ಗಂಗಳ ಕತ್ತಿನ ಸುತ್ತಲೂ ತೋಳು ಬಳಸಿ ಹೇಳಿದ. "ನಮ್ಮ ಅಮ್ಮಾವರನ್ನ ನೋಡಿ ಸಾವುಕಾರರೆ....ಯಾರ ಸಹಾಯವೂ ಇಲ್ಲದೆ ನಡೆಯುತ್ತಾರೆ...."

ರಾಮುನ ಕಿರುಗಣ್ಣಿನ ತುಂಬ ಕಣ್ಣೀರು ತುಂಬಿ ಅವನ ಉಬ್ಬಿದ ಕಪ್ಪು ಕೆನ್ನೆಗಳ ಮೇಲೆ ಬಿದ್ದು, ಹತ್ತಿರದಲ್ಲಿದ್ದ ದೀಪದ ಬೆಳಕಿನಲ್ಲೂ ಮಿಂಚಿದವು. ಹೆಗಲ ಮೇಲಿದ್ದ ದಪ್ಪನೆಯ ಟವಲಿನಿಂದ ರಾಮು ಮುಖವನ್ನು ಒರಸಿಕೊಂಡು ಮುಖದ ಮೇಲೆ ಮಂದಹಾಸ ಚೆಲ್ಲಿದ.

ಮಾಧವನನ್ನು ರೈಲ್ವೆ ನಿಲ್ದಾಣ ತಲುಪಿದ ರೈಲು ಎಚ್ಚರಿಸಿತು.

"ಬರ್ತೀನೊ ರಾಮು....ಮದ್ರಾಸಿಗೆ ಹೊರಟದೀವಿ. ಮನೆ ಕಡೆ ಆದಾಗ ಬಾ...."

"ಆಗಲಿ ಬುದ್ಧಿ...."

ಮಾಧವ ಹೆಂಡತಿ ಮಗಳೊಡನೆ ರೈಲು ಹತ್ತಿದ. ರೈಲು ತನ್ನ ಗುರಿಯನ್ನು ಹಿಡಿದು ಯಾವ ವಿಧವಾದ ಭಾವೋದ್ವೇಗಗಳಿಗೂ ವಶವಾಗದೆ ಮುಂದೆ ಸಾಗಿತು.

ಅಮೆರಿಕಾದಿಂದ ಬಂದಿದ್ದ ವೈದ್ಯರಿಗಾಗಿ ಮಾಧವ ಮಗಳೊಡನೆ ಆಸ್ಪತ್ರೆಯ ಕೋಣೆಯ ಬಾಗಿಲ ಬಳಿ ಇದ್ದ ಬೆಂಚಿನ ಮೇಲೆ ಕಾದು ಕುಳಿತ. ಅವನಂತೆಯೆ ಹತ್ತಾರು ಜನರು ವೈದ್ಯರ ದಾರಿ ನೋಡುತ್ತಿದ್ದರು.

ಸೂಟು ಧರಿಸಿ, ಕನ್ನಡಕವನ್ನು ಕೈಲಿ ಹಿಡಿದು ಆ ಕೋಣೆಯನ್ನು ಒಬ್ಬರು ಪ್ರವೇಶ ಮಾಡಿದಾಗ ಅವರೇ ವೈದ್ಯರಿರಬಹುದೆಂಬ ಸಂಶಯ ಮಾಧವನನ್ನು

ಕಾಡಿತು. ಅವರ ಮೈ ಬಣ್ಣದಿಂದ ಅಮೆರಿಕಾ ದೇಶದವರಿರಬಹುದೆಂದು ಮಾಧವ ನಿಗೆ ಸ್ಪಷ್ಟವಾಯಿತು.

ಮಾಧವ ಮೌನವಾಗಿ ನಿಂತು ಆ ಸೂಟುಧಾರಿಗೆ ಕೈ ಮುಗಿದ.

"ತಾವು ಯಾರನ್ನು ನೋಡಬೇಕಾಗಿತ್ತು?"

"ಅಮೆರಿಕಾದಿಂದ ಬಂದಿರುವ ಪೋಲಿಯೋ ಖಾಯಿಲೆಗೆ ಚಿಕಿತ್ಸೆ ನೀಡುವ ವೈದ್ಯರನ್ನು...."

ಮಾಧವನ ಮಾತು ನಿಲ್ಲುವ ಮೊದಲೇ ಅವರು ಮುಗುಳ್ನಕ್ಕರು.

"ಅವರು ಇನ್ನರ್ಧ ಗಂಟೆಯಲ್ಲಿ ಬರ್ತಾರೆ. ನೀವು ಕಾಯುತ್ತಿರಿ...."

ಕನ್ನಡಕವನ್ನು ಕರವಸ್ತ್ರದಿಂದ ಒಂದೆರಡು ಬಾರಿ ಒರಸಿ ಆತ ಮತ್ತೆ ಅದನ್ನು ತಮ್ಮ ಮೊಂಡು ಮೂಗಿನ ಮೇಲೆ ಕೂರಿಸಿಕೊಂಡರು.

ರೈಲ್ವೆ ನಿಲ್ದಾಣದಿಂದ ನೇರವಾಗಿ ಮಾಧವ ಮಗಳು, ಹೆಂಡತಿಯೊಡನೆ ಆಸ್ಪತ್ರೆಯ ಬಾಗಿಲಿಗೇ ಬಂದಿದ್ದ. ನಿಲ್ಲಲು ಮದ್ರಾಸಿನಲ್ಲಿ ಪರಿಚಯದ ಮನೆ ಗಳಿಲ್ಲದುದರಿಂದ ಆದಷ್ಟು ಜಾಗ್ರತೆ, ಸಾಧ್ಯವಾದರೆ ಆ ದಿನ ಸಾಯಂಕಾಲವೇ ಮದ್ರಾಸು ಬಿಡಬೇಕೆಂದು ಅವನು ಮನಸ್ಸಿನಲ್ಲೇ ಲೆಕ್ಕ ಹಾಕಿಕೊಂಡಿದ್ದ.

ವಿಜ್ಞಾನದಲ್ಲಿ ಹೆಚ್ಚು ಮುಂದುವರಿದು, ಅನೇಕ ಸಂಶೋಧನೆಗಳನ್ನು ನಡೆಸಿ ವೈದ್ಯಕೀಯ ಶಾಸ್ತ್ರದಲ್ಲಿ ಲೆಕ್ಕವಿಲ್ಲದಷ್ಟು ಔಷಧಿ ಹಾಗೂ ಶಸ್ತ್ರ ಚಿಕಿತ್ಸೆ ಗಳನ್ನು ಕಂಡು ಹಿಡಿದಿರುವ ಅಮೆರಿಕಾ ದೇಶದವರಲ್ಲಿ ಮಾಧವನಿಗೆ ಗೌರವವಿತ್ತು. ಆದ್ದರಿಂದಲೇ ಅವನು ಹೆಚ್ಚಿನ ಆಸೆಯಿಟ್ಟು ಅಮೆರಿಕಾ ದೇಶದ ವೈದ್ಯರನ್ನು ಕಾಣಲು ಧಾವಿಸಿ ಬಂದಿದ್ದ. ಕುಂಟುವ ಮಗಳ ಕಾಲನ್ನು ಆತ ಸರಿಪಡಿಸಬಹು ದೆಂಬ ಆಶಾಗೋಪುರ ಅವನ ಮನಸ್ಸಿನ ದೇಗುಲದ ಮೇಲಿತ್ತು.

ಗಾಲಿಯ ಶಬ್ದ ಮಾಧವನ ಮನಸ್ಸಿನ ಯೋಚನೆಗಳ ಮಾಡಿಯನ್ನು ಮಧ್ಯ ದಲ್ಲಿಯೇ ತುಂಡರಿಸಿ ಹಾಕಿತು. ಮಾಧವ ತಲೆ ಎತ್ತಿ ನೋಡಿದ. ನಾಲ್ಕು ಕಬ್ಬಿಣದ ಗಾಲಿಗಳಿದ್ದ ಬೆತ್ತದ ಕುರ್ಚಿಯ ಮೇಲೆ ಕುಳಿತಿದ್ದ ಒಬ್ಬಾತ ಸಮೀಪದ ಲ್ಲಿದ್ದ ಬಾಗಿಲಿನ ಮೂಲಕ ಕುರ್ಚಿಯನ್ನು ತಾವೇ ತಳ್ಳಿಕೊಂಡು ಒಳಗೆಹೋದರು.

"ಪಾಪ! ಎರಡು ಕಾಲೂ ಕಳೆದುಕೊಂಡಿದ್ದಾರೆ ಆತ....!"

ಮಾಧವ ಆ ವೃದ್ಧರ ಬಗ್ಗೆ ಅನುಕಂಪ ಸೂಚಿಸಿದ.

ಮಾಧವನ ಸರದಿ ಬಂದಾಗ ಅವನು ಮಗಳನ್ನು ಕರೆದುಕೊಂಡು ವೈದ್ಯ ರನ್ನು ಕಾಣಲು ರೂಮಿನೊಳಗೆ ಕಾಲಿರಿಸಿದ.

ಅಲ್ಲಿ ಅವನು ಕಂಡದ್ದೇನು !

ಮುಂದಡಿಯಿಡುತ್ತಿದ್ದ ಅವನ ಅವಸರದ ಹೆಜ್ಜೆಗಳನ್ನು ತಡೆದು ನಿಲ್ಲಿಸಿದ ದೃಶ್ಯ ಅದಾವುದು ?

ಆ ಕೋಣೆಯಲ್ಲಿದ್ದ ದೊಡ್ಡ ಮೇಜಿನ ಮುಂದೆ ಗಾಲಿಗಳಿದ್ದ ತಳ್ಳುವ ಕುರ್ಚಿಯ ಮೇಲೆ ಆ ವೃದ್ಧರು ಕುಳಿತಿದ್ದರು.

'ಹಾಗಾದರೆ ಎರಡು ಕಾಲುಗಳನ್ನೂ ಕಳೆದುಕೊಂಡು ದಿನವೆಲ್ಲಾ ತಳ್ಳುವ ಕುರ್ಚಿಯ ಸಹಾಯದಿಂದ ಚಲಿಸುವ ಈ ವೃದ್ಧರು ಪೋಲಿಯೋ ಖಾಯಿಲೆಯ ವೈದ್ಯರೆ ?'

ಮಾಧವ ಬೆರಗು ಬಡಿದವನಂತೆ ಮಗಳ ಕೈ ಹಿಡಿದು ನಿಂತುಬಿಟ್ಟ.

"ಬನ್ನಿ....ನಿಮ್ಮ ಮಗಳೆ? ಎಷ್ಟನೆ ವರ್ಷದಿಂದ ನಿಮ್ಮ ಮಗಳಿಗೆ ಕಾಲು ಹೋಯಿತು? ಏನೇನು ಚಿಕಿತ್ಸೆ ಮಾಡಿಸಿದಿರಿ....?"

ಪೆಚ್ಚಾಗಿ ನಿಂತಿದ್ದ ಮಾಧವನಿಗೆ ಅವರೇ ವೈದ್ಯರೆಂದು ಖಚಿತವಾಯಿತು. ಒಮ್ಮೆ ತಲೆ ಕೊಡವಿಕೊಂಡು ಎಚ್ಚೆತ್ತುಕೊಂಡ.

ಮಾಧವ ಗಂಗಳ ಚರಿತ್ರೆಯನ್ನೆಲ್ಲಾ ಅವರ ತಲೆಗೆ ತುಂಬಿದ. ಆತ ಗಂಗಳ ಬಲಗಾಲನ್ನು ಹಿಡಿದು ಬಹಳ ಹೊತ್ತು ಪರೀಕ್ಷೆ ಮಾಡಿದರು.

"ಕೋಲು ಹಿಡಿದು ನಡೆಯುವ ಹಾಗೆ ಆದದ್ದು ಯಾವಾಗ ?"

"ಬೊಂಬಾಯಿಯಲ್ಲಿ ಪೋಲಿಯೋ ಆಸ್ಪತ್ರೆಯಲ್ಲಿ ವೈದ್ಯರೊಬ್ಬರು ಗಂಗಳಿಗೆ ಶಸ್ತ್ರಚಿಕಿತ್ಸೆ ಮಾಡಿದ ಮೇಲೆ ಅವಳಿಗೆ ನಿಲ್ಲಲು ಸಾಧ್ಯವಾಯಿತು. ಕ್ರಮೇಣ ಕೋಲು ಹಿಡಿದು ಇವಳು ನಡೆಯುವುದನ್ನು ಅಭ್ಯಾಸ ಮಾಡಿಕೊಂಡಳು...."

"ಅಬ್ಬಾ ! ಇಂಡಿಯಾ ದೇಶದಲ್ಲಿ ಇಷ್ಟರ ಮಟ್ಟಿಗೆ ಪೋಲಿಯೋದಿಂದ ಶಕ್ತಿಯನ್ನು ಕಳೆದುಕೊಂಡಿದ್ದ ಕಾಲಿನ ಮೇಲೆ ಶಸ್ತ್ರಚಿಕಿತ್ಸೆ ನಡೆಸಿದ ವೈದ್ಯರು ಇದ್ದಾರೆಯೇ ? ಆಶ್ಚರ್ಯ ! ನಿಮ್ಮ ಮಗಳ ಕಾಲಿಗೆ ಇಷ್ಟು ಶಕ್ತಿ ತಂದುಕೊಡಲು ಸಹಾಯಮಾಡಿದ ಆ ವೈದ್ಯರನ್ನು ನಾನು ನಿಜವಾಗಿಯೂ ಭೇಟಿ ಮಾಡಬೇಕು...."

ಟೊಮ್ಯಾಟೊ ವರ್ಣದ ಆ ಅಮೇರಿಕ ದೇಶದ ವೈದ್ಯರು ಗಂಗೆಯ ಕಾಲನ್ನು ನೋಡಿ ಆಶ್ಚರ್ಯ ಹಾಗೂ ಸಂತೋಷವನ್ನು ವ್ಯಕ್ತಪಡಿಸಿದರು.

"ನಿಮ್ಮಿಂದ ಏನಾದರೂ ನನ್ನ ಮಗಳಿಗೆ ಸಹಾಯವಾಗುವುದೇನೋ ಅಂತ...."

ಮಾಧವ ತಡವರಿಸುತ್ತಾ ತಾನು ಅಲ್ಲಿಗೆ ಬಂದ ಕಾರಣವನ್ನು ವಿವರಿಸಿದ.

"ಅಭ್ಯಾಸ ಬಲದ ಮೇಲೆ ನಿಮ್ಮ ಮಗಳು ಕೋಲಿನ ಸಹಾಯವಿಲ್ಲದೆ ಕೆಲವಾರು ವರ್ಷಗಳಲ್ಲಿ ನಡೆಯಬಹುದು. ಹೆಚ್ಚಿಗೆ ನಾನೇನೂ ಹೇಳಲಾರೆ ....ಒಂದು ಮಾತು...."

ಮಾಧವನ ಮುಖದ ಮೇಲೆ ನಿರಾಶೆಯ ನೆರಳು ಆಟವಾಡಿತು. ಹಿಂತಿರುಗುತ್ತಿದ್ದ ಅವನನ್ನು ವೈದ್ಯರು ತಡೆದರು.

"ನಿಮ್ಮ ಮಗಳೂ ವೈದ್ಯಳಾಗಲಿ. ಪೋಲಿಯೊ ಕಾಯಿಲೆಯಲ್ಲಿ ಪ್ರವೀಣಳಾಗಲಿ. ಹೆಚ್ಚಿನ ವ್ಯಾಸಂಗಕ್ಕೆ ಹೊರದೇಶಗಳಿಗೆ ಹೋಗಿ ಬರಲಿ. ಅದಕ್ಕೆ ನೀವು ಅವಕಾಶ ಕೊಡಿ...."

ಮಾಧವ ತಲೆಯಾಡಿಸಿದ.

"ಮಗೂ...."

ಕೈಗಳಿಂದ ಕುರ್ಚಿಯ ಎರಡು ಪಾರ್ಶ್ವಗಳಲ್ಲಿದ್ದ ಕಬ್ಬಿಣದ ಗಾಲಿಗಳನ್ನು ತಿರುಗಿಸುತ್ತಾ ಆ ವೈದ್ಯರು ತಮ್ಮ ಕುರ್ಚಿಯನ್ನು ಗಂಗಳ ಪಕ್ಕದಲ್ಲಿ ತಂದು ನಿಲ್ಲಿಸಿದರು. ಓಡಾಡಲು ಆ ವೈದ್ಯರಿಗೆ ಗಾಲಿಯ ಕುರ್ಚಿ !

ಓಡಾಡಲು ಗಂಗಳಿಗೆ ಎರಡು ಮರದ ಕೋಲುಗಳ ನೆರವು !

ಎರಡು ಕಾಲುಗಳೂ ಇಲ್ಲದ ಆತನಿಗಿಂತ ಗಂಗಳ ಸ್ಥಿತಿಯೇ ಎಷ್ಟೋ ಮೇಲು ಎನಿಸಿತು–ನಿಂತು ಇಬ್ಬರನ್ನೂ ತೂಗಿ ನೋಡುತ್ತಿದ್ದ ಮಾಧವನಿಗೆ.

"ಮಗೂ....ಚಿಕ್ಕ ವಯಸ್ಸಿನಲ್ಲೇ ಪೋಲಿಯೋ ಕಾಯಿಲೆಯಿಂದ ನಾನು ಎರಡು ಕಾಲುಗಳನ್ನೂ ಕಳೆದುಕೊಂಡೆ. ವೈದ್ಯನಾಗಿ ಆ ಕಾಯಿಲೆಯನ್ನು ನಿರ್ಮೂಲ ಮಾಡುವೆ, ಆ ಕಾಯಿಲೆಯ ಕಪಿಮುಷ್ಠಿಗೆ ಸಿಕ್ಕಿ ನರಳುತ್ತಿರುವ ನೂರಾರು ಮಕ್ಕಳಿಗೆ ಗುಣಪಡಿಸುವ ಶಕ್ತಿಯನ್ನು ವೈದ್ಯನಾಗಿ ಸಂಪಾದಿಸುವೆನೆಂದು ಚಿಕ್ಕವಯಸ್ಸಿನಲ್ಲೇ ನಿರ್ಧರಿಸಿಕೊಂಡೆ...."

ವೈದ್ಯರು ಮಾತಿನ ನಡುವೆ ಕೊಂಚ ವಿರಾಮಕ್ಕೆ ಅವಕಾಶ ಕಲ್ಪಿಸಿಕೊಂಡರು. ಅವರ ಮಾತಿನಲ್ಲಿದ್ದ ಭಾವೋದ್ವೇಗವನ್ನು ಮಾಧವ ಗಮನಿಸಿದ.

"ನಾನು ವೈದ್ಯನಾದೆ. ಆದರೆ ನಾನು ನಿರ್ಧರಿಸಿಕೊಂಡಿದ್ದಂತೆ ಪೋಲಿಯೊ ಕಾಯಿಲೆಯಿಂದ ನರಳುತ್ತಿರುವ ಮಕ್ಕಳಿಗೆ ಸಂಪೂರ್ಣವಾಗಿ ಗುಣಪಡಿಸುವ ಶಕ್ತಿ ನನಗೆ ಲಭಿಸಲಿಲ್ಲ. ಮಗೂ, ನೀನು ನನಗಿಂತ ಅದೃಷ್ಟವಂತಳಾಗಿರಬಹುದು. ನನ್ನಿಂದಾಗದ ಕೆಲಸ ನಿನ್ನಿಂದ ಸಾಧ್ಯವಾಗಬಹುದು. ಸಾಧ್ಯವಾಗಲಿ ಎಂದು ನಾನು ಆಶೀರ್ವದಿಸುತ್ತೇನೆ. ಆ ಭಗವಂತನು ನಿನಗೆ ನೆರವು ನೀಡಲಿ.... ಹೋಗಿ ಬಾ ಮಗು...."

ಕೊನೆಯ ಮಾತು ಆ ವೈದ್ಯರ ಗದ್ಗದ ಕಂಠದಿಂದ ಹೊರಬಂದಿತು.

ಆತ ಗಂಗಳ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸಿದರು. ಮಾಧವ ಮಗಳೊಡನೆ ನಿಧಾನವಾಗಿ ಆ ಕೋಣೆಯಿಂದ ಹೊರಗೆ ಬಂದ.

ಕೋಣೆಯ ಬಾಗಿಲ ಬಳಿ ನಿಂತು ಕೊನೆಯ ಬಾರಿ ರೂಮಿನಲ್ಲಿದ್ದ ಆ ವೈದ್ಯರನ್ನು ಮಾಧವ ಹಿಂತಿರುಗಿ ನೋಡಿದ.

ಅವರು ಗೋಡೆಯ ಮೇಲಿದ್ದ ಏಸುಕ್ರಿಸ್ತನ ಚಿತ್ರವನ್ನೇ ನೋಡುತ್ತಿದ್ದರು. ಸುಕ್ಕು ಹಿಡಿದಿದ್ದ ಆ ವೈದ್ಯರ ಕೆನ್ನೆಯ ಮೇಲೆ ಕಣ್ಣೀರಿನ ಹನಿಯೊಂದು ಮಿನುಗುತ್ತಿತ್ತು.

ಆ ವೃದ್ಧ ವೈದ್ಯರ ಮಾತು ಗಂಗಳ ಹೃದಯದಲ್ಲಿ ನಾಟಿಕೊಂಡಿತು. ವೈದ್ಯಳಾಗಿ ತನ್ನಂತೆ ನರಳುತ್ತಿರುವ ನೂರಾರು ಮಕ್ಕಳಿಗೆ ಕೈಲಾದ ಸೇವೆ ಮಾಡಬೇಕೆಂಬ ನಿರ್ಧಾರ ಅವಳ ಮನಸ್ಸಿನಲ್ಲಿ ಮೂಡಿತು.

ಓದಲು ಪುಸ್ತಕವನ್ನು ಕೈಗೆ ತೆಗೆದುಕೊಂಡಾಗಲೆಲ್ಲಾ ಆ ವೈದ್ಯರ ಮುಖ ಗಂಗೆಯ ಮುಂದೆ ಬಂದು ನಿಲ್ಲುತ್ತಿತ್ತು. ಅಂದು ಅವರಾಡಿದ ಮಾತು ಅವಳ ಕಿವಿಯಲ್ಲಿ ಪ್ರತಿಧ್ವನಿ ಕೊಡುತ್ತಿತ್ತು.

* * * *

ಮಕ್ಕಳ ಫಲಿತಾಂಶವನ್ನು ತಿಳಿದು ಬಂದ ಮಾಧವನ ಮುಖದಲ್ಲಿ ಮಂದಹಾಸ ಮಿನುಗುತ್ತಿತ್ತು.

"ಗಂಗ....ನಿನಗೆ ಮೊದಲನೆಯ ದರ್ಜೆಯಲ್ಲಿ ತೇರ್ಗಡೆಯಾಗಿದೆ...."

"ರಮೇಶ....ನೀನು ತೇರ್ಗಡೆಯಾಗಿದ್ದೀಯ...."

"ನನ್ನ ಫಲಿತಾಂಶ....?"

ನಳಿನಿ ಪ್ರಶ್ನೆ ಹಾಕಿ ಪೆಚ್ಚುಮುಖ ಹಾಕಿಕೊಂಡು ನಿಂತುಕೊಂಡಳು. ತನ್ನ ಫಲಿತಾಂಶವೇನಾಯಿತೆಂದು ತಂದೆ ತಿಳಿಸದಿದ್ದಾಗಲೆ ಅವಳ ಮನಸ್ಸಿಗೆ ಒಂದು ಬಗೆಯ ಅಳುಕು. ಆದರೂ ಬಿದ್ದುಹೋಗಿದ್ದ ಗಂಟಲಿಗೆ ಧೈರ್ಯ ತುಂಬಿ ಕೇಳಿದಳು.

"ನಿನಗೆ ತೇರ್ಗಡೆಯಾಗಲಿಲ್ಲಾಮ್ಮ...."

"ನಾನು ಇನ್ನು ಓದೋದೂ ಇಲ್ಲ....ಸುಡುಗಾಡು ಪರೀಕ್ಷೆಗೆ ಕುಳಿತುಕೊಳ್ಳೋದೂ ಇಲ್ಲ...."

"ಮತ್ತೆ ಮದುವೆಯಾಗಿ ಗಂಡನ ಮನೆಗೆ ಹೋಗಿಬಿಡೋದು ತಾನೆ ?"

ಗಂಗ ಅಕ್ಕನನ್ನು ರೇಗಿಸಿದಳು. ಗೋಪಾಲನೊಡನೆ ಅವಳ ಮದುವೆ ನಿಶ್ಚಯವಾಗಿತ್ತು.

"ನನ್ನ ರಿಸಲ್ಟು ಏನಾಯಿತು ನೋಡಿದಿರಾ ?"

ಪದ್ಮಾವತಮ್ಮನವರ ನಾಲ್ಕನೆಯ ಮಗ ಶಾಮು ಕಳ್ಳ ಹೆಜ್ಜೆಯಿಂದ ಬಂದು ಮಾಧವನನ್ನು ಕೇಳಿದ. ಅವನ ಬೆನ್ನ ಹಿಂದಿನಿಂದ ಕೋರೆ ಹಲ್ಲುಗಳ ಒಡತಿ ಪದ್ಮಾವತಮ್ಮ ಮಾತನಾಡಿದರು.

"ನಿನಗೇನು ಹೋಗಿ ನೋಡಿಕೊಂಡು ಬರುವುದಕ್ಕೆ. ದೇವರು ಕಾಲು ಕೊಟ್ಟಿಲ್ವೇನೂ ?"

ಆಕೆಯಾಡಿದ ಮಾತು ಗಂಗಳ ಮನಸ್ಸನ್ನು ನೋಯಿಸಿತು.

"ಓ ! ಮರೆತುಬಿಟ್ಟೆ ಶಾಮು...."

ಮಾಧವ ನಿಜವಾದ ಕಾರಣವನ್ನು ತಿಳಿಸಿದ. ಗಂಗ ಮೊದಲನೆಯ ದರ್ಜೆಯಲ್ಲಿ ತೇರ್ಗಡೆಯಾಗಿರುವ ವಿಷಯ ತಿಳಿದ ಕೂಡಲೆ ಮಾಧವ ಉತ್ಸಾಹದಿಂದ ಮನೆಯ ದಾರಿ ಹಿಡಿದಿದ್ದ. ಆತುರದ ಆವೇಗದಲ್ಲಿ ಅವನಿಗೆ ಶಾಮುವಿನ ಫಲಿತಾಂಶವನ್ನು ತಿಳಿಯುವುದು ನೆನಪಾಗಲಿಲ್ಲ.

"ಹೋಗಿ ನೋಡಿಕೊಂಡು ಬರೋದಕ್ಕೆ ಧೈರ್ಯ ಬೇಕಲ್ಲ ಅವನಿಗೆ...."

ಶಾಮುವಿನಣ್ಣ ಅನಂತು ತಮ್ಮನು ಫಲಿತಾಂಶ ತಿಳಿಯಲು ಹೋಗದೆ ಇದ್ದ ಕಾರಣವನ್ನು ಸುಲಭವಾಗಿ ಊಹಿಸಿ, ಅದನ್ನು ಎಲ್ಲರೆದುರಿನಲ್ಲೂ ಬಹಿರಂಗ ಪಡಿಸಿದ.

"ನೋಡ್ತಾ ಇರು....ನಾನೇ ಹೋಗಿ ತಿಳಿದುಕೊಂಡು ಬರ್‍ತೀನಿ...."

ವೀರ ಸಿಪಾಯಿಯಂತೆ ಎದೆ ತಟ್ಟಿದ ಶಾಮು ಶಾಲೆಯ ದಾರಿ ಹಿಡಿದ.

"ಈ ಪರೀಕ್ಷೆಯಲ್ಲಿ ಫಸ್ಟ್‌ಕ್ಲಾಸ್ ಹೊಡೆದಂತೆ ನೀನು ಪ್ರಿ-ಯೂನಿವರ್ಸಿಟಿ ಪರೀಕ್ಷೆಯಲ್ಲೂ ಕ್ಲಾಸ್ ಗಿಟ್ಟಿಸಬೇಕು ಗಂಗ...."

ಮಾಧವ ಪ್ರೋತ್ಸಾಹದ ಮಾತುಗಳಿಂದ ಮಗಳ ಬೆನ್ನು ಚಪ್ಪರಿಸಿದ.

ಅಂಗಹೀನಳಾಗಿರುವ ಮಗಳಿಗೆ ಬೆನ್ನೆಲುಬಿನಂತಿದ್ದ ವಿದ್ಯೆಯೇ ಅವಳ ಭವಿಷ್ಯದ ಊರುಗೋಲು ಎನ್ನುವುದನ್ನು ಮಾಧವ ಚೆನ್ನಾಗಿ ನಂಬಿಬಿಟ್ಟಿದ್ದ.

"ನಾನು ಕಾಲೇಜಿಗೆ ಹೋಗ್ತೀನಣ್ಣ. ಈಗ ಕೋಲೂರಿಕೊಂಡು ನಡೀತೀನಲ್ಲಾ ?"

"ರಸ್ತೆಯಲ್ಲಿ ವಾಹನಗಳ ಓಡಾಟದ ಮಧ್ಯೆ ಕೋಲೂರುತ್ತಾ ನಿಧಾನವಾಗಿ ನಡೆಯುವುದು ತುಂಬಾ ಅಪಾಯಕರ ಗಂಗ. ಅದರಿಂದ ನಿನ್ನ ದೇಹಕ್ಕೂ ಹೆಚ್ಚು ಆಯಾಸವಾಗುವುದು...."

"ನನಗೇನೂ ತೊಂದರೆಯಾಗುವುದಿಲ್ಲಾಣ್ಣ...."

ತಂದೆಯ ಮಾತು ಗಂಗೆಯ ಕಣ್ಣಿನಲ್ಲಾಗಲೇ ನೀರು ತುಂಬಿಸುತ್ತಿತ್ತು.

"ಎರಡು ಹೊತ್ತೂ ಕಾಲೇಜಿಗೆ ಜಟಕಾ ಗಾಡಿಯಲ್ಲಿ ನೀನು ಹೋಗಿ ಬರುವಿಯಂತೆ. ಅಲ್ಲಿ ಓಡಾಡುವಾಗ ಮಾತ್ರ ಸ್ವಲ್ಪ ಎಚ್ಚರಿಕೆಯಿಂದಿರು...."

ಗಂಗ ಉತ್ಸಾಹದಿಂದ 'ಹೂಂ' ಗುಟ್ಟಿದಳು. ಅವಳ ಕನಸು ನನಸಾಗುವಂತಾಗಿ, ಮನಸ್ಸಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಕುಣಿದು ಕುಪ್ಪಳಿಸುವ ಬಯಕೆಯಾದರೂ, ಆ ಕೆಲಸ ಅವಳಿಂದ ಸಾಧ್ಯವಾಗದೆ ಇದ್ದುದರಿಂದ, ಕೈಯೊಳಗಿದ್ದ ಕೋಲುಗಳನ್ನು ನೆಲದ ಮೇಲೆ ಕುಟ್ಟುವುದರ ಮೂಲಕ ತನ್ನ ಮನಸ್ಸಿಗುಂಟಾದ ಸಂತೋಷವನ್ನು ಗಂಗ ವ್ಯಕ್ತಪಡಿಸಿದಳು.

ತನ್ನ ಒಂಟಿ ಬಾಳು ಮುಕ್ತಾಯವಾಗಿ, ಬದುಕು ಬಂಗಾರವಾದಂತೆ ಅವಳಿಗೆ ಭಾಸವಾಯಿತು.

ಹದಿನಾರರ ಪ್ರಾಯದಲ್ಲಿದ್ದರೂ ಗಂಗ ಮಂಡಿ ಮುಚ್ಚುವ ಲಂಗಗಳನ್ನೇ ಹಾಗುತ್ತಿದ್ದಳು. ಸೀರೆಯುಟ್ಟು ಕೋಲೂರುತ್ತಾ ಕುಂಟುವುದು ಅವಳಿಗೆ ಸಾಧ್ಯವಾಗುತ್ತಿರಲಿಲ್ಲ. ಕಾಲು ಮುಚ್ಚುವವರೆಗೂ ಲಂಗವನ್ನು ಹಾಕುವುದರಿಂದ ಗಂಗೆಗೆ ನಡೆಯಲು ಕಷ್ಟವಾಗುತ್ತಿತ್ತು. ಒಂದು ದಿನ ಹಿಮ್ಮಡಿ ಮುಟ್ಟುವ ಲಂಗವನ್ನು ಹಾಕಿ ನಡೆಯಲು ಪ್ರಯತ್ನಿಸಿ ಬಿದ್ದು ಗಂಗ ಹಣೆಯೊಡೆದುಕೊಂಡಿದ್ದಳು. ಆ ದಿನವೇ ಲಂಗವನ್ನು ಕುಮುದ ಪೆಟ್ಟಿಗೆಯ ಅಡಿಯಲ್ಲಿ ತುರುಕಿಟ್ಟಳು.

ಗಂಗೆಯ ಬಲಗಾಲು ಅವಳ ಎಡಗಾಲಿಗಿಂತ ಎರಡೂವರೆ ಅಂಗುಲದಷ್ಟು ಚಿಕ್ಕದಾಗಿತ್ತು. ಬೊಂಬಾಯಿಯ ಆಸ್ಪತ್ರೆಯಲ್ಲಿ ಮಾಡಿದ ಶಸ್ತ್ರಚಿಕಿತ್ಸೆಯಿಂದ ಅವಳ ಕಾಲಿಗೆ ಶಕ್ತಿ ಬಂದಿದ್ದರೂ, ಅವಳ ಬಲಗಾಲು ಎಡಗಾಲಿಗಿಂತ ಮೋಟ ಕಾಯಿತು. ಅದನ್ನು ಎಡಗಾಲಿನ ಅಳತೆಗೆ ಸರಿಮಾಡಲು ಅಲ್ಲಿನ ವೈದ್ಯರಿಂದ ಸಾಧ್ಯವಾಗಲಿಲ್ಲ. ಆದ್ದರಿಂದ ನಡೆಯುವಾಗ ಅವಳು ಕುಂಟುತ್ತಿದ್ದಳು.

"ನಳಿನಿ....ಸ್ವಲ್ಪ ತರಕಾರಿ ಹೆಚ್ಚಿಕೊಡು...."

ಅಂದು ಯುಗಾದಿ. ಹೊಸ ವರ್ಷದ ಹಬ್ಬವನ್ನು ಆಚರಿಸುವ ಸಂಭ್ರಮದಲ್ಲಿದ್ದ ಕುಮುದ ಮಗಳ ಸಹಾಯವನ್ನು ಅಪೇಕ್ಷಿಸಿದಳು.

"ನಾನು ಓದುತ್ತಾ ಇದೀನಮ್ಮಾ...."

"ನೀನು ಓದಿ ಉದ್ಧಾರವಾಗೋದು ಅಷ್ಟರಲ್ಲೇ ಇದೆ. ಪುಸ್ತಕ ಬಿಸಾಕಿ ಎದ್ದು ಬಾ...."

ಕುಮುದ ಸಹನೆ ತಪ್ಪಿ ಮಗಳ ಮೇಲೆ ಸಿಡುಗುಟ್ಟಿದಳು.

ನಳಿನಿ ಅತ್ಯಾಸಕ್ತಿಯಿಂದ ಓದುತ್ತಿದ್ದುದು ಕಾಮಪ್ರಚೋದಿತವಾದ ಒಂದು ಕಾದಂಬರಿ. ಕಾಲೇಜಿಗೆ ನಮಸ್ಕಾರ ಹೊಡೆದ ಮೇಲೆ ಕೈಗೆ ಸಿಕ್ಕಿದ ಕಾದಂಬರಿ

ಗಳನ್ನು ಓದಲು ಅವಳಿಗೆ ಬೇಕಾದಷ್ಟು, ಮನಸ್ಸಿಗೆ ತೃಪ್ತಿಯಾಗುವಷ್ಟು ಕಾಲ ಸಿಕ್ಕುತ್ತಿತ್ತು.

ನಳಿನಿಗೆ ಮನೆಗೆಲಸವೆಂದರೆ ತಲೆನೋವು. ಅವಳು ಏನಾದರೊಂದು ನೆಪ ಹೇಳಿ ತಾಯಿ ಹೇಳುತ್ತಿದ್ದ ಸಣ್ಣ ಪುಟ್ಟ ಕೆಲಸಗಳಿಂದ ಸುಲಭವಾಗಿ ನುಣುಚಿ ಕೊಂಡು ಬಿಡುತ್ತಿದ್ದಳು. ಹಬ್ಬದ ದಿನ ಮಕ್ಕಳಿಗೆಲ್ಲಾ ನೀರು ಹಾಕಿ, ಅಡಿಗೆಯ ಕೆಲಸದಲ್ಲಿದ್ದ ಕುಮುದಳಿಗೆ ಮಗಳ ನೆರವು ಅವಶ್ಯಕವಾಗಿ ಬೇಕಾಯಿತು.

"ಇಪ್ಪತ್ತು ವರ್ಷವಾಯ್ತು ನಿನಗೆ....ನೆಟ್ಟಗೆ ಅನ್ನ, ಸಾರು ಸಹ ಮಾಡು ವುದಕ್ಕೆ ಬರೋದಿಲ್ವಲ್ಲಾ. ಗೋಪಾಲ ನಿನ್ನನ್ನು ಕಟ್ಟಿಕೊಂಡು ಎರಡು ಕೈನಲ್ಲೂ ಊಟ ಮಾಡಬೇಕು ಅಷ್ಟೆ...."

ಕುಮುದ ಹಣೆ ಚಚ್ಚಿಕೊಂಡಳು.

"ತರಕಾರಿ ನಾನು ಹೆಚ್ಚಿಸಿಕೊಡ್ತೇನಮ್ಮಾ...."

ಗಂಗ ಕೋಲುಗಳ ಸಹಾಯವಿಲ್ಲದೆ ಗೋಡೆಯನ್ನು ಹಿಡಿದುಕೊಂಡು ನಿಧಾನವಾಗಿ ಅಡಿಗೆ ಮನೆಯ ಬಾಗಿಲಿಗೆ ಬಂದು ನಿಂತಳು.

"ಕೋಸಂಬರಿಗೆ ಸ್ವಲ್ಪ ಸೌತೇಕಾಯಿ ಹೆಚ್ಚಿಸಿಕೊಡು. ಗಂಗ...."

ಸಿಪ್ಪೆ ತೆಗೆಯುವ ಚಾಕು ಹಿಡಿದು ಗಂಗ ಕೆಲಸದಲ್ಲಿ ಮೈಮರೆತಳು. ಮುಕ್ತಾಯವಾದ ತಾಯಿಯ ಗೊಣಗಾಟದಿಂದ ನಳಿನಿಗೆ ಸಂತೋಷವಾಯಿತು. ಅದಕ್ಕೆ ಕಾರಣಳಾದ ತಂಗಿಯನ್ನು ನಳಿನಿ ಮನಸ್ಸಿನಲ್ಲೇ ವಂದಿಸಿ ಮತ್ತೆ ಕಾದಂಬರಿಯನ್ನು ಮುಖದ ಮುಂದೆ ಹಿಡಿದುಕೊಂಡಳು.

ಸಧ್ಯದಲ್ಲಿಯೇ ಮದುವೆಯಾಗಿ ಗೃಹಿಣಿಯಂತೆ ಬಾಳ್ವೆ ನಡೆಸಬೇಕಾಗಿರುವ ಹಿರಿಯ ಮಗಳನ್ನೂ, ಕಿರಿಯ ಮಗಳನ್ನೂ ಮನಸ್ಸಿನಲ್ಲೆ ತೂಗಿ ನೋಡಿದಳು ಕುಮುದ.

ಅಡಿಗೆ ಮಾಡುವುದರಲ್ಲಿ....ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವು ದರಲ್ಲಿ ಗಂಗೆಗೆ ಎಲ್ಲಿಲ್ಲದ ಆಸಕ್ತಿ, ಶ್ರದ್ಧೆ !

ಅದಕ್ಕೆ ತೀರ ವಿರುದ್ಧ ಸ್ವಭಾವದವಳು ನಳಿನಿ.

ಆದರೆ ಮದುವೆಯಾಗಿ ಗೃಹಿಣಿಯಾಗುವುದು ಗಂಗೆಗೆ ಈ ಜನ್ಮದಲ್ಲಿ ಸಾಧ್ಯವೆ? ಕುಂಟಿಯನ್ನು ಅಗ್ನಿಸಾಕ್ಷಿಯಾಗಿ ಕೈ ಹಿಡಿದು ಅವಳ ಬಾಳನ್ನು ಬೆಳಗಿಸಲು ಮುಂದೆ ಬರುವ ಯುವಕ ನಮ್ಮ ಸಮಾಜದಲ್ಲಿದ್ದಾನೆಯೆ ?

ಅಂಗಹೀನ ಹೆಣ್ಣಿಗೆ ದಾಂಪತ್ಯಜೀವನ ದೊರಕುವುದು ಸಾಧ್ಯವೆ ?

"ಹಾ !"

ಯೋಜನೆಗಳ ಸುಳಿಗಾಳಿಗೆ ಸಿಕ್ಕಿಕೊಂಡು ದಿಕ್ಕುದೆಸೆಯಿಲ್ಲದೆ ಸುತ್ತುತ್ತಿದ್ದ ಕುಮುದಳಿಗೆ ಇಹಲೋಕದ ಪರಿಜ್ಞಾನವೇ ಇರಲಿಲ್ಲ. ಮೈಮರೆವಿನಲ್ಲಿ ಅವಳ ಕೈ ಕಾದ ಒಲೆಗೆ ತಗುಲಿತ್ತು. ಕಾದ ಕಬ್ಬಿಣದ ಒಲೆ ಮರೆತ ಅವಳ ದೇಹವನ್ನು ಎಚ್ಚರಿಸಿತು.

"ಏನು ಯೋಚ್ನೆ ಮಾಡ್ತಾ ಇದ್ದೆಯಮ್ಮಾ?"

ಗಂಗ ತಾಯಿಯನ್ನು ಪ್ರಶ್ನಿಸಿದಳು.

ಮಗಳ ಆ ಪ್ರಶ್ನೆ ತಾಯಿಯ ಅಂತರಂಗವನ್ನೇ ಬೆದಕಿ ನೋಡುವಂತಿತ್ತು.

ಈಗ ಗಂಗ ಏನೂ ಅರಿಯದ, ಯಾವುದೂ ಅರ್ಥವಾಗದ ಎಳೆಯ ಮಗುವಾಗಿರಲಿಲ್ಲ. ಅವಳ ದೇಹ, ಮನಸ್ಸು ಎರಡೂ ತಕ್ಕಮಟ್ಟಿಗೆ ಪಕ್ವವಾಗಿದ್ದವು. ತನ್ನ ವಿಷಯವಾಗಿ ತಂದೆ ತಾಯಿಗಳು ಕೊರಗಿ ಮುಪ್ಪಾಗುತ್ತಿದ್ದಾರೆ ಎನ್ನುವ ವಿಷಯ ಅವಳಿಗೆ ತಿಳಿದುಹೋಗಿತ್ತು.

* * * *

ಪದ್ಮಾವತಮ್ಮನವರು ಉಟ್ಟ ಸೀರೆಯ ಸೆರಗಿನ ಕೊನೆಯನ್ನು ಕಣ್ಣಿಗೊತ್ತುತ್ತಲೇ ಕುಮುದಳ ಮುಂದೆ ಬಂದು ನಿಂತರು.

"ಕುಮುದಮ್ಮ...." ಆಕೆ ಬಿಕ್ಕಿದರು.

"ಯಾಕೆ ಪದ್ಮಾವತಮ್ಮ....ಏನಾಯ್ತು....?"

ಮಲ್ಲಿಗೆ ಮೊಗ್ಗುಗಳನ್ನು ಸೂಜಿಗೆ ಪೋಣಿಸಿ ದಂಡೆ ಕಟ್ಟುತ್ತಿದ್ದ ಕುಮುದ ಪದ್ಮಾವತಮ್ಮನವರ ಕಣ್ಣೀರನ್ನು ನೋಡಿ ಗಾಬರಿಗೊಂಡಳು.

ಅರೆ ಹೊಟ್ಟೆ ತಿಂದುಕೊಂಡು, ಬೆಳಗಿನಿಂದ ರಾತ್ರಿಯವರೆಗೆ ಗಾಣದೆತ್ತಿನಂತೆ ದುಡಿಯುತ್ತಿದ್ದರೂ ಆಕೆಯ ಮುಖದ ಮೇಲೆ ಸದಾ ಮಂದಹಾಸ ಮಿನುಗುತ್ತಿತ್ತು. ಒಂದು ಹಿಡಿ ಅಕ್ಕಿ ಮನೆಯಲ್ಲಿಲ್ಲದಿದ್ದರೂ ಆಕೆಯ ಮುಖದಲ್ಲಿ ತೃಪ್ತಿ ನೆಲೆಸಿರುತ್ತಿತ್ತು. ಸಾಲ ಕೇಳುವಾಗಲೂ ಪದ್ಮಾವತಮ್ಮ ಕುಮುದಳ ಮುಂದೆ ನಿಂತು ಎಂದೂ ತಲೆ ತಗ್ಗಿಸಿದವರಲ್ಲ. ತಾವು ಕೊಟ್ಟ ಸಾಮಾನನ್ನು ಕುಮುದಳಿಂದ ಮತ್ತೆ ತೆಗೆದುಕೊಂಡು ಹೋಗುವ ಧಾಟಿಯಲ್ಲಿ ಬೇಕಾದ ಸಾಮಾನನ್ನು ಪಡೆದು ಹೋಗುತ್ತಿದ್ದರು.

ತೆರೆದ ಪುಟದಷ್ಟು ಸ್ಪಷ್ಟವಾಗಿ ಕುಮುದಳಿಗೆ ಆಕೆಯ ಸ್ವಭಾವದ ಪರಿಚಯವಾಗಿತ್ತು.

ಪದ್ಮಾವತಮ್ಮ ಕಣ್ಣೀರು ಹಾಕುವುದೆಂದರೇನು?

ಇದಕ್ಕೆ ಕಾರಣ?

ಸೆರಗಿನ ಮರೆಯಲ್ಲಿ ಪದ್ಮಾವತಮ್ಮ ಮುಸಿ ಮುಸಿ ಅಳುತ್ತಿದ್ದರೂ ಆಕೆಯ ಉಗ್ರ ಸ್ವರೂಪದ ಕೋರೆ ಹಲ್ಲುಗಳ ನಗ್ನಪ್ರದರ್ಶನ ಕುಮುದಳಿಗೆ ಸಿಕ್ಕಿತು.

"ನಾವು ಈ ಊರು ಬಿಟ್ಟು ಹಾಸನಕ್ಕೆ ಹೊರಟುಹೋಗ್ತೇವೆ...."

"ಸರಿ....ಅದಕ್ಕೆ ನೀವು ಅಳುವುದೇಕೆ ಪದ್ಮಾವತಮ್ಮ....?"

ಅರ್ಥವಾಗದೆ ಬೆಪ್ಪು ಹಿಡಿದವಳಂತೆ ಕುಳಿತ ಜಾಗದಿಂದ ಕದಲದೆ ಪ್ರಶ್ನಿಸಿದಳು ಕುಮುದ.

"ನಿಮ್ಮನ್ನು ಬಿಟ್ಟು ದೂರ ಹೊರಟುಹೋಗಬೇಕಲ್ಲಾ ಅಂತ...."

ಮತ್ತೆ ಆಕೆಯ ಸೆರಗಿನ ಕೊನೆ ಕಣ್ಣಿನ ಬಳಿಗೋಡಿತು.

ಆಕೆಯ ಕಣ್ಣೀರಿಗೆ ಕಾರಣ ತಿಳಿದ ಮೇಲೆ ಕುಮುದಳ ಮನಸ್ಸಿಗೆ ಎಷ್ಟೋ ನೆಮ್ಮದಿಯುಂಟಾಯಿತು.

"ನನ್ನಂಥವರು ಹಾಸನದಲ್ಲಿ ಲೆಕ್ಕವಿಲ್ಲದಷ್ಟು ಜನ ಸಿಕ್ತಾರೆ ನಿಮಗೆ.... ಶುಕ್ರವಾರದ ದಿವಸ, ಮುತ್ತೈದೆ, ಈ ಸಣ್ಣ ವಿಷಯಕ್ಕಾಗಿ ಕಣ್ಣೀರು ಹಾಕುವುದೆ....?"

ಕುಮುದ ಮಲ್ಲಿಗೆಯ ಮಾಲೆ ಕಟ್ಟುವ ಕೆಲಸವನ್ನು ಮುಂದುವರಿಸಿದಳು.

ಕುಮುದಳಂತೆ ಕೇಳಿದಾಗಲೆಲ್ಲಾ ಸಾಮಾನುಗಳನ್ನು ಕಾಸಿಲ್ಲದೆ, ಮತ್ತೆ ಪಡೆಯುವ ಆಸೆಯಿಲ್ಲದೆ ಪದ್ಮಾವತಮ್ಮನಿಗೆ ಕೊಡಲು ಯಾರೂ ಮುಂದೆ ಬರುತ್ತಿರಲಿಲ್ಲ. ಆಕೆಯ ಬಡತನಕ್ಕೆ ಮರುಗಿ ಕುಮುದ ಕೈಲಾದ ಸಹಾಯವನ್ನು ಮಾಡಿ ಒಳ್ಳೆಯವಳೆನಿಸಿಕೊಂಡಿದ್ದಳು. ಕುಮುದಳಂತಹವರು ಹಾಸನದಲ್ಲಿ ಸಿಕ್ಕುವರೇ ಎಂಬ ಯೋಚನೆ ಪದ್ಮಾವತಮ್ಮನಿಗೆ. ಅದಕ್ಕಾಗಿ ಕಣ್ಣೀರು ಹಾಕಿದ್ದರು ಆಕೆ.

* * * *

ತಲೆ ಕೆದರಿಕೊಂಡು, ಮಂಚದ ಮೇಲೆ ಕಾಲು ಚಾಚಿ ಕೈಯ್ಯಲ್ಲೊಂದು ಕಾದಂಬರಿಯನ್ನು ಹಿಡಿದು ಮಲಗಿದ್ದಳು ನಳಿನಿ. ಕಿಟಕಿಯಿಂದ ಹಾರಿ ಬಂದು ಬಿತ್ತು ಒಂದು ಕೆಂಪು ಹಣ್ಣು.

ನಳಿನಿ ಆ ಹಣ್ಣನ್ನು ತಿರುಗಿಸಿ ನೋಡುತ್ತಿದ್ದಾಗ ಹಸಿರು ಬಣ್ಣದ ಹಣ್ಣೊಂದು ಅದೇ ಕಿಟಕಿಯನ್ನು ತೂರಿ ಬಂದು ನಳಿನಿಯ ಹಣೆಗೆ ಬಡಿಯಿತು.

"ಅಮ್ಮಾ...." ನೋವಿನಿಂದ ನಳಿನಿ ಏಟು ಬಿದ್ದ ಜಾಗವನ್ನು ಅಂಗೈಯಿಂದ ಉಜ್ಜಿಕೊಂಡಳು.

"ತುಂಬಾ ನೋವಾಯ್ತೇನು....?"

ನಳಿನಿ ಗಾಬರಿಯಿಂದ ಮಂಚದ ಮೇಲೆ ಎದ್ದು ಕುಳಿತುಕೊಂಡಳು. ಸೂಟು ಧರಿಸಿ ಎದುರಿಗೆ ನಿಂತಿದ್ದ ಗೋಪಾಲ, ಅವಳ ಭಾವಿ ಗಂಡ!

"ಯಾವಾಗ ಬಂದೆ ಗೋಪಿ?"

ಗೋಪಾಲನ ಮುಖ ಕಂಡ ಕೂಡಲೆ ಏಟಿನ ನೋವು ನಳಿನಿಯ ಭಾಗಕ್ಕೆ ಇಲ್ಲವಾಯಿತು.

"ಇನ್ಮೇಲೆ ಗೋಪೀನ ನೀನು ಬಹುವಚನದಲ್ಲಿ ಮಾತನಾಡಿಸಬೇಕು ನಳಿನಿ. ಹೆಸರು ಹಿಡಿದು ಕೂಗಬೇಡ...."

ತಮ್ಮನ ಪರ ವಹಿಸಿ ಮಗಳಿಗೆ ಎಚ್ಚರಿಕೆ ಕೊಟ್ಟಳು ಕುಮುದ.

"ಸಧ್ಯ! ಅಕ್ಕ ಹೇಳಿದ್ದೇ ಸಾಕು ಅಂತ ನೀನು 'ಬನ್ನಿ....ಹೋಗಿ....' ಅಂತ ಪ್ರಾರಂಭ ಮಾಡಿದರೆ ನಾನು ಇವತ್ತೇ ಊಟಿಗೆ ಓಡಿಹೋಗ್ತೀನಿ...."

ಗೋಪಾಲ ಕುಮುದಳ ಮಾತನ್ನು ತೆಗೆದು ಹಾಕಿದ. ಅವನ ಮಾತು ಕೇಳಿ ನಳಿನಿಗೆ ಉಸಿರಾಡುವಂತಾಯಿತು. ಮಾವನನ್ನು ಯಾವಾಗಲೂ 'ಗೋಪಿ' ಎಂದು ಏಕವಚನದಲ್ಲೇ ಮಾತನಾಡಿಸುತ್ತಿದ್ದ ನಳಿನಿಗೆ ಒಮ್ಮಿಂದೊಮ್ಮೆಗೆ ಬಹುವಚನದ ಪ್ರಯೋಗ ಅಸಾಧ್ಯವಾಗಿ ಕಂಡಿತು.

"ನಾಳೆ ಮದುವೆಯಾದ ಮೇಲೂ ಎಲ್ಲರೆದುರಿನಲ್ಲಿ ನೀನು ಅವನನ್ನು 'ಗೋಪಿ....ಇಲ್ಲಿ ಬಾರೋ' ಎಂದು ಕೂಗು, ಬಹಳ ಚೆನ್ನಾಗಿರುತ್ತೆ...."

ಮತ್ತೆ ಮಾತು ತೆಗೆದಾಡಿದಳು ಕುಮುದ.

"ಕರೆಯಲಿ ಬಿಡಕ್ಕ...."

"ಆಗಲೇ....ಮದುವೆಯಾಗುವುದಕ್ಕಿಂತ ಮುಂಚೆಯೇ ಅವಳ ಪರ ವಹಿಸಿಕೊಂಡು ಮಾತನಾಡ್ತೀಯಲ್ಲಾ ಮಾವ...."

ಗಂಗ ಮಾವನ ಕೋಟು ಹಿಡಿದು ಜಗ್ಗಿದಳು.

"ಅರೆ! ಗಂಗ ನಡೆಯುತ್ತಾಳೆಯೆ? ಈ ವಿಷಯ ನನಗೆ ತಿಳಿದೇ ಇರಲಿಲ್ಲ."

ಗೋಪಾಲ ದಿಗ್ಭ್ರಮೆಯಿಂದ ತನ್ನ ಕಡೆಗೆ ನಡೆದು ಬಂದ ಗಂಗಳನ್ನೇ ನೋಡುತ್ತಿದ್ದ. ಅವನ ಬೆರಳುಗಳ ಬಿಗಿಯಲ್ಲಿ ನಿಂತಿದ್ದ ಚಕ್ಕಳದ ಪೆಟ್ಟಿಗೆಯ ಹಿಡಿ ಜಾರಿ, ಪೆಟ್ಟಿಗೆ ನೆಲದ ಮೇಲೆ ಕುಕ್ಕರಿಸಿಕೊಂಡಿತು.

"ಗಂಗ ಕಾಲೇಜಿಗೆ ಹೋಗ್ತಾ ಇದಾಳೆ ಗೋಪಿ...."

"ನಿಜವಾಗಿ? ವಂಡರ್‌ಫುಲ್...."

ಗೋಪಿ ಗಂಗಳ ಸೊಂಟದ ಸುತ್ತಲೂ ಅಕ್ಕರೆಯಿಂದ ತೋಳು ಬಳಸಿದ.

“ಪರೀಕ್ಷೆಯಲ್ಲಿ ಏನಾಯ್ತು ನಳಿನಿ....?”

“ಆಗೋದೇ ಆಯ್ತು....” ನಳಿನಿ ಉದಾಸೀನತೆಯಿಂದ ಉತ್ತರಕೊಟ್ಟಳು.

“ಅಂದರೆ....?” ಅವಳ ಒಗಟು ಮಾತಿನ ಅರ್ಥ ತಿಳಿಯದೆ ಬೆಪ್ಪಾಗಿ ನಿಂತ ಗೋಪಾಲ ತಡವರಿಸಿದ.

“ಫೇಲಾಯ್ತು....”

‘ತೇರ್ಗಡೆಯಾಯ್ತು’ ಅನ್ನುವ ಧಾಟಿಯಲ್ಲಿ ಉತ್ತರ ಕೊಟ್ಟಳು ನಳಿನಿ.

“ವಿದ್ಯಾಭ್ಯಾಸಕ್ಕೆ ಶರಣುಹೊಡೆದು ಆರಾಮವಾಗಿ ಉಂಡುತಿಂದು ಮನೆಯಲ್ಲೇ ಕುಳಿತು ನೀನು ಕಾಲಹಾಕುತ್ತಿದ್ದೀಯೆಂದು ನಿನ್ನನ್ನು ನೋಡಿದ ಕೂಡಲೆ ನಾನು ತಿಳಿದುಕೊಂಡೆ.”

ಗೋಪಾಲನ ಕಣ್ಣು ಒಂದು ಬಾರಿ ಮೈತುಂಬಾ ಓಡಾಡಿತು.

“ಅದು ಹೇಗೊ ?”

ಹುಬ್ಬೇರಿಸಿ ಸವಾಲು ಹಾಕುವ ರೀತಿಯಲ್ಲಿ ನಳಿನಿ ಗೋಪಾಲನನ್ನು ಕೇಳಿದಳು.

“ನೀನು ಮೈ ಬೆಳಸಿರುವುದನ್ನು ನೋಡಿದರೇ ತಿಳಿಯೋದಿಲ್ವೆ ?”

“ಗೋಪಿ....ನಾನು ತುಂಬಾ ದಪ್ಪಗಿದೀನಾ ?”

ತಾನು ಕೇಳಿದ ಪ್ರಶ್ನೆಗೆ ಉತ್ತರ ತಿಳಿದಿದ್ದರೂ ನಳಿನಿ ಮುಗ್ಧಳಂತೆ ಗೋಪಾಲನ ಅಭಿಪ್ರಾಯವನ್ನು ತಿಳಿಯಲು ಪ್ರಯತ್ನಿಸಿದಳು. ಸಧ್ಯದಲ್ಲಿಯೇ ಅವನು ಅಗ್ನಿಸಾಕ್ಷಿಯಾಗಿ ಅವಳ ಕೈಹಿಡಿಯುವವನಾಗಿದ್ದುದರಿಂದ, ನಳಿನಿಗೆ ಅವನ ಅಭಿಪ್ರಾಯ ತಿಳಿಯುವ ಅಗತ್ಯ ತೋರಿತು.

“ಸಂತೇಲಿ ಕಾಸುಕೊಟ್ಟು ಕಣಿ ಕೇಳು. ಕೈ ಹುಣ್ಣಿಗೆ ಕನ್ನಡಿ ಬೇಕೆ ? ಅಂದಹಾಗೆ ನಿನ್ನ ರೂಮಿನಲ್ಲಿರುವ ನಿಲುಗನ್ನಡಿ ಮುಂದೆ ನಿಂತು ನೀನೇ ನೋಡಿಕೊಂಡರೆ ಗೊತ್ತಾಗೋದಿಲ್ವೇನು ?”

“ನಾನೇನು ತುಂಬಾ ದಪ್ಪಗಿಲ್ಲ....ಇನ್ನೇನು ನಿನ್ನಹಾಗೆ ಒಣಗಿದ ಮರದ ಕಡ್ಡಿಯಂತಿರಬೇಕೇನೊ ?” ಗುಂಡಗಿದ್ದ ಗೋಪಾಲ ಕೆಲಸವಾಗಿ, ಹೋಟಲಿನ ಊಟ ಪ್ರಾರಂಭಿಸಿದ ಮೇಲೆ ತೆಳ್ಳಗಾಗಿಬಿಟ್ಟಿದ್ದ.

“ಇಲ್ಲ....ಬಳಕುವ ಎಳೆಯ ಜಾಜಿಯ ಬಳ್ಳಿಯಂತಿದ್ದೀಯ ನೀನು. ನಿನ್ನಂತೆ ಕೊಬ್ಬಿದ ಆನೆಯಂತಿರುವುದಕ್ಕಿಂತ ನನ್ನಂತೆ ಒಣಗಿದ ಕಡ್ಡಿಯಂತಿರುವುದೇ ಒಳ್ಳೆಯದು....”

"ನಿಮ್ಮ ಜಗಳ ಆಮೇಲೆ ಆಗಲಿ. ಗೋಪಿ....ಮೊದಲು ಸ್ನಾನಮಾಡಿ ಹೊಟ್ಟೆಪಾಡು ನೋಡು...."

ಕುಮುದ ತಮ್ಮನನ್ನು ಎಚ್ಚರಿಸಿದಳು. ಅವರಿಬ್ಬರ ನಡುವೆ ಬಂದ ಕುಮುದಳ ಮಾತು ಅವರ ಜಗಳದ ಮಧ್ಯೆ ಮುಳ್ಳು ಬೇಲಿಯಂತೆ ನಿಂತಿತು.

ನಳಿನಿಯ ಮೊಂಡು ಬರಲಿನಂತಿದ್ದ ಮೋಟು ಜಡೆಯನ್ನು ಜಗ್ಗಿಸಿದ ಗೋಪಾಲ ಬಚ್ಚಲುಮನೆಯ ಕಡೆ ಹೆಜ್ಜೆ ಹಾಕಿದ.

ಇಂಜನಿಯರ್ ಎನಿಸಿಕೊಂಡು ಗೋಪಾಲ ಊಟಿಯಲ್ಲಿದ್ದ ದೊಡ್ಡ ಕಾರ್ಖಾನೆಯೊಂದರಲ್ಲಿ ಕೆಲಸಮಾಡುತ್ತಿದ್ದ. ಕೈತುಂಬ ಸಂಪಾದಿಸುತ್ತಿದ್ದರೂ, ಅವನ ತಲೆ ತಿರುಗಿರಲಿಲ್ಲ. ಎಂಟು ವರ್ಷದ ಹಸುಳೆಯಂತಿತ್ತು ಅವನ ಮನಸ್ಸು.

"ನಳಿನಿ....ಲಕ್ಷಣವಾಗಿ ತಲೆಬಾಚಿಕೊಂಡು ಬೇರೆ ಸೀರೆ ಉಟ್ಟುಕೋಬಾರ್ದೆ? ಬೆಳಗ್ಗೆ ಹನ್ನೊಂದು ಹೊಡೆದಿದ್ದರೂ, ಕಸಮಾರಿ ಹಾಗೆ ತಲೆ ಕೆದರಿಕೊಂಡು ಕುಳಿತಿದೀಯಲ್ಲೇ...."

ಕುಮುದ ಮಗಳ ಅವತಾರವನ್ನು ಕಂಡು ಜಿಗುಪ್ಸೆಯಿಂದ ಮುಖ ಸಿಂಡರಿಸಿದಳು. ತಾಯಿಯ ಮಾತು ಕೇಳಿದ ನಳಿನಿಗೆ ಎಲ್ಲಿಲ್ಲದ ಆಶ್ಚರ್ಯವಾಯಿತು.

"ಇದೇನಮ್ಮ....ಎಂದೂ ಇಲ್ಲದ್ದು ಈ ದಿನ ನನ್ನ ಅಲಂಕಾರದ ವಿಷಯದಲ್ಲಿ ನಿನಗೇಕಿಷ್ಟು ಆಸಕ್ತಿ ?....ಸಾಯಂಕಾಲ ತಲೆ ಬಾಚಿಕೊಳ್ಳುತ್ತೇನೆ...."

ಹಣೆಯ ತುಂಬಾ ತುಂಬಿನಿಂತಿದ್ದ ಕೂದಲುಗಳ ರಾಶಿಯನ್ನು ಅಸಡ್ಡೆಯಿಂದ ಹಿಂದಕ್ಕೆ ಸರಿಸುತ್ತಾ ತಾಯಿಗೆ ಉತ್ತರಕೊಟ್ಟಳು ನಳಿನಿ.

ಕಾಲೇಜಿಗೆ ಶರಣು ಹೊಡೆದ ಮೇಲೆ ಬೆಳಗಿನ ಹೊತ್ತು ನಳಿನಿ ಅಲಂಕಾರಕ್ಕೆ ಹೆಚ್ಚು ಗಮನ ಕೊಡುತ್ತಿರಲಿಲ್ಲ. ಸಾಯಂಕಾಲ ಸಮಾಜಕ್ಕೆ ಹೋಗುವ ಮುನ್ನವೇ ಅವಳು ಕನ್ನಡಿಯ ಮುಂದೆ ಕುಳಿತು ಅಲಂಕಾರಕ್ಕೆ ಪ್ರಾರಂಭಿಸುತ್ತಿದ್ದಳು.

ಮಗಳು ಶೃಂಗರಿಸಿಕೊಂಡು ಓಡಾಡಿ ತಮ್ಮನ ಕಣ್ಣಿಗೆ ಹಬ್ಬವನ್ನುಂಟುಮಾಡಲಿ ಎನ್ನುವ ಚಪಲ ಕುಮುದಳಿಗೆ.

"ಗೋಪಿ ಮನೇಗೆ ಬಂದಿರುವಾಗ ಲಕ್ಷಣವಾಗಿ ತಲೆಬಾಚಿಕೊಂಡು ಬೇರೆ ಸೀರೆ ಉಟ್ಟುಕೊಬಾರದೆ !"

"ಸರಿ....ಈಗ ನಿನ್ನ ಮಾತು ನನಗೆ ಅರ್ಥವಾಯ್ತು. ಕಸಮಾರಿ ಹಾಗಿದ್ರೆ ಗೋಪಿ ಹೆದರಿ ಓಡಿಹೋಗ್ತಾನೆ ಎಂದು ಹೆದರಿಕೆಯೇನಮ್ಮಾ ? ನಾನು ಶೃಂಗ

ಸಿಕೊಂಡು ಗೋಪಿಯನ್ನು ಮೆಚ್ಚಿಸುವ ಮಹತ್ಕಾರ್ಯಕ್ಕೇನೂ ಶ್ರಮಪಡ ಬೇಕಾಗಿಲ್ಲ. ಎಂದೋ ಗೋಪಿ ನನ್ನನ್ನು ಮೆಚ್ಚಿಕೊಂಡಿದ್ದಾನೆ...."

ನಳಿನಿಯ ಓರೆ ನೋಟ, ವಕ್ರವಾಗಿದ್ದ ತುಟಿಗಳ ನಡುವೆ ಕಂಡೂ ಕಾಣಿಸ ದಂತಿದ್ದ ಮುಗುಳ್ನಗೆ ಇವುಗಳನ್ನು ಕಂಡು ಕುಮುದ ಮಗಳಿಗೆ ಇನ್ನು ಬುದ್ಧಿ ಹೇಳುವುದರಿಂದ ಪ್ರಯೋಜನವಿಲ್ಲವೆಂದು ನಿರ್ಧರಿಸಿ ಅಡಿಗೆ ಮನೆಗೆ ಹೊರಟು ಹೋದಳು.

ಗೋಪಿಗೆ ಸಂಡಿಗೆ ಎಂದರೆ ಸ್ವಲ್ಪ ಪಕ್ಷಪಾತ. ಊಟದಲ್ಲಿ ಸಂಡಿಗೆ ಯೊಂದಿದ್ದುಬಿಟ್ಟರೆ ಅವನು ಭಕ್ಷ್ಯಗಳನ್ನೆಲ್ಲಾ ಎಲೆಯ ಮೂಲೆಗೆ ನಿರ್ದಾಕ್ಷಿಣ್ಯದಿಂದ ಉತ್ತರಿಸಿಬಿಡುತ್ತಿದ್ದ. ತಮ್ಮನಿಗೆ ಪ್ರಿಯವಾದ ಸಂಡಿಗೆಯನ್ನು ತಟ್ಟೆಗೆ ಕುಮುದ ಬಡಿಸಿದಾಗ ಅವನ ಮುಖ ಅರಳಿತು.

"ಏನಕ್ಕಾ....ಸಂಡಿಗೆ ಕರಿದುಬಿಟ್ಟಿದ್ದೀಯಾ ?"

"ಹೂ....ಈ ವರ್ಷದಲ್ಲೇ ಮಗಳ ಮದುವೆಮಾಡಿ ಜವಾಬ್ದಾರಿ ಕಳೆದು ಕೊಳ್ಳಬೇಕೆಂದು ನಿರ್ಧರಿಸಿಬಿಟ್ಟಿದ್ದೇನೆ ಗೋಪಿ. ಸಂಡಿಗೆ, ಹಪ್ಪಳ ಎಲ್ಲವನ್ನೂ ಮಾಡಿಟ್ಟಿದ್ದೇನೆ. ನಿನಗೆ ಸಂಡಿಗೆ ಅಂದರೆ ಪಂಚಪ್ರಾಣ ಅಂತ ನನಗೆ ಗೊತ್ತಿ ಲ್ಲವೆ....? ಹುಳಿ ಜೊತೆಗೆ ಇರಲಿ ಅಂತ ನಾಲ್ಕು ಸಂಡಿಗೆ ಕರಿದೆ...."

"ಹಾಗಾದರೆ ಈ ವರ್ಷವೇ ಮಗಳ ಮದುವೆ ಮಾಡಿಬಿಡ್ತೀಯಾ ಅನ್ನು. ನನಗೂ ಆಹ್ವಾನ ಪತ್ರಿಕೆ ಕಳುಹಿಸುತ್ತೀ ತಾನೆ ? ಅಂದ ಹಾಗೆ ನಿನ್ನ ಭಾವೀ ಅಳಿಯ ಯಾರು ಅಕ್ಕ ?"

ಗೋಪಿ ಕುಚೋದ್ಯ ಮಾಡಿ ಅಕ್ಕನನ್ನು ರೇಗಿಸಲು ನಿರ್ಧರಿಸಿದ.

ಆ ಸಮಯಕ್ಕೆ ಸರಿಯಾಗಿ ನಳಿನಿ ಶೃಂಗರಿಸಿಕೊಂಡು ಅಡಿಗೆ ಮನೆಯ ಬಾಗಿಲ ಬಳಿ ಪ್ರತ್ಯಕ್ಷಳಾದಳು. ಗೋಪಿ ಆಡಿದ ಮಾತು ಕೇಳಿ ಅವಳಿಗೂ ಸಿಟ್ಟು ಬಂತು.

"ಯಾವನೋ ಒಬ್ಬ....ಅದರ ಯೋಚನೆ ನಿನಗ್ಯಾಕೋ ?"

ಕಡುಬಿನಂತೆ ಕೆನ್ನೆ ಉಬ್ಬಿಸಿ ಕೇಳಿದಳು ನಳಿನಿ.

"ಅಲ್ಲಾ....ನಿನ್ನ ಕೈ ಹಿಡಿಯೋ ಬಡಪಾಯಿ ಯಾರು ತಿಳಿದುಕೊಳ್ಳೋಣ ಎನ್ನುವ ಕುತೂಹಲವಾಯ್ತು. ಅದಕ್ಕೇ ಕೇಳಿದೆ....ತಪ್ಪಾಯ್ತು...."

"ಸಂಡಿಗೆ ಚೆನ್ನಾಗಿದೆಯೆ ಗೋಪಿ ?"

ಕುಮುದ ಗೋಪಿಯ ಮನಸ್ಸನ್ನು ಸಂಡಿಗೆಯ ಕಡೆಗೆ ಸೆಳೆದಳು.

"ಸೊಗಸಾಗಿದೆ ಅಕ್ಕ. ನಳಿನೀಗೆ ಅಡಿಗೆ, ತಿಂಡಿ ಮಾಡುವುದಕ್ಕೆ ಬರುವುದೇನು ?"

"ಅಡಿಗೆ, ತಿಂಡಿ ಮಾಡೋದಕ್ಕೆ ನಳಿನಿಗೆ ಬರುವುದಿಲ್ಲ ಗೋಪಿ. ನೀನು ಇವಳನ್ನು ಕಟ್ಟಿಕೊಂಡರೆ ಉದ್ಧಾರವಾದ ಹಾಗೆ...."

"ಅಡಿಗೆ ಮಾಡುವುದಕ್ಕೆ ಬರದಿದ್ದರೇನಂತೆ ಮಾಡಿದ್ದನ್ನು ಅಚ್ಚುಕಟ್ಟಾಗಿ ಹೊಟ್ಟೆ ತುಂಬ ತಿನ್ನೋದಿಲ್ವೇನೊ ?"

ಗೋಪಿಯ ಬಳಿ ಇದ್ದ ಚಾಪೆಯ ಮೇಲೆ ಕುಳಿತಿದ್ದ ನಳಿನಿ ಜಡೆಯ ಕೊನೆಯನ್ನು ತಿರುಚುತ್ತಾ ಶಾಂತಸ್ವರದಲ್ಲಿ ಹೇಳಿದಳು.

"ಹಾಗೆ ಹೇಳುವುದಕ್ಕೆ ನಾಚಿಕೆಯಾಗೋದಿಲ್ವೇನೆ ನಳಿನಿ ?"

ಮಗಳ ಉತ್ತರ ಕೇಳಿ ಹಣೆ ಚಚ್ಚಿಕೊಂಡಳು ತಾಯಿ.

"ನಾಚಿಕೆಯಾಕಾಗಬೇಕು ? ತಿನ್ನುವುದಕ್ಕೂ ಕೇಳಿಕೊಂಡು ಬಂದಿರಬೇಕು ಆ ಭಗವಂತನನ್ನು. ಎಲ್ಲಿ....ನಾನು ಮಾಡುವಷ್ಟು ಊಟ, ನಾನು ತಿನ್ನುವಷ್ಟು ತಿಂಡಿಯನ್ನು ಗೋಪಿ ತಿನ್ನಲಿ ನೋಡೋಣ ?"

ಬಿದ್ದರೂ ಮೀಸೆ (ಇದ್ದರಲ್ಲವೆ?) ಮಣ್ಣಾಗಲಿಲ್ಲವೆಂಬಂತೆ ಸವಾಲು ಹಾಕಿ ಊಟದ ಸ್ಪರ್ಧೆಗೇ ಸಿದ್ಧಳಾದಳು ನಳಿನಿ.

ಸ್ಪರ್ಧೆಯಲ್ಲಿ ಭಾಗವಹಿಸುವ ಮೊದಲೇ ಸೋಲನ್ನೊಪ್ಪಿಕೊಂಡು ಭಾವಿ ಹೆಂಡತಿಗೆ ಶರಣಾಗತನಾದ ಗೋಪಿ.

"ಗೋಪಿ ಸೋತ...."

ಹುಡುಗುತನದ ಸ್ವಭಾವದವಳಾದ ನಳಿನಿ ಕೈ ಚಪ್ಪಾಳೆ ತಟ್ಟಿದಳು.

"ನಾನು ಸೋತರೂ ಪರವಾಗಿಲ್ಲ....ಬಕಾಸುರನ ಹಾಗೆ ತಿಂದು ನಿನ್ನಹಾಗೆ ಊದುವುದರಲ್ಲಿ ನನಗೆ ಸ್ವಲ್ಪವೂ ಆಸಕ್ತಿ ಇಲ್ಲ...."

"ಸ್ವಲ್ಪ ತುಪ್ಪ ಹಾಕ್ತೀನೋ ಗೋಪಿ. ಮಜ್ಜಿಗೆ ಹುಳಿ ಸ್ವಲ್ಪ ಖಾರ ಇರಬಹುದು...."

"ಬೇಡ ಅಕ್ಕ. ಹೋಟಲಿನ ಊಟ ಪ್ರಾರಂಭವಾದ ಮೇಲೆ ನನಗೆ ಖಾರವೂ ಅಭ್ಯಾಸವಾಗಿಬಿಟ್ಟಿದೆ."

ಗೋಪಿ ಎಲೆಯ ಮೇಲೆ ತನ್ನ ಎರಡು ಕೈಗಳನ್ನೂ ಅಡ್ಡ ಹಿಡಿದ.

ಊಟ ಮುಗಿಸಿದ ಮೇಲೆ ಹಜಾರದಲ್ಲಿದ್ದ ರತ್ನಗಂಬಳಿಯ ಮೇಲೆ ಎಲ್ಲರೂ ಹರಟೆಗೆ ಕುಳಿತುಕೊಂಡರು. ಗೋಪಿ ಉಂಡ ಅನ್ನದ ಮೇಲೆ ಸಿಗರೇಟು ಹೊತ್ತಿಸಿ ಕಾಲು ಚಾಚಿ ರತ್ನಗಂಬಳಿಯ ಮೇಲೆ ಉರುಳಿಕೊಂಡ. ಗಂಗ ಕೋಲೂರುತ್ತಾ

ಬಂದು ಅಕ್ಕನ ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡಳು. ಕುಳಿತ ಮೇಲೆ ಕೈಯೊಳಗಿದ್ದ ಕೋಲುಗಳನ್ನು ಕುರ್ಚಿಯ ಬೆನ್ನಿಗೆ ಒರಗಿಸಿಟ್ಟಳು.

ನಳಿನಿ ಬೆಳ್ಳಿಯ ತಟ್ಟೆಯಲ್ಲಿ ಎಲೆ, ಅಡಿಕೆ, ಸುಣ್ಣವನ್ನಿಟ್ಟುಕೊಂಡು ಗೋಪಿಯ ತಲೆಯ ಬಳಿ ಕುಳಿತುಕೊಂಡಳು.

"ಗಂಗ....ಮುಂದೆ ಏನು ಓದಬೇಕೂಂತಿದ್ದೀಯಾ ?"

ಗೋಪಿ ಬೀಸುವ ಗಾಳಿಯಲ್ಲಿ ಸುರುಳಿ ಸುರುಳಿಯಾಗಿ ಉರುಳಿ ಹೋಗುತ್ತಿದ್ದ ಸಿಗರೇಟಿನ ಹೊಗೆಯಲ್ಲೇ ದೃಷ್ಟಿಯಿಟ್ಟು ಗಂಗೆಯನ್ನು ಪ್ರಶ್ನೆ ಮಾಡಿದ.

"ಗಂಗ ಡಾಕ್ಟರ್ ಆಗ್ತಾಳಂತೆ ಗೋಪಿ...."

ಮಗಳ ಪರವಾಗಿ ತಾಯಿ ಉತ್ತರಕೊಟ್ಟಳು.

"ಯಾಕಾಗಬಾರದು ಅಕ್ಕ? ಶ್ರದ್ಧೆಯಿಟ್ಟು ಓದಿದರೆ ಖಂಡಿತವಾಗಿ ಅವಳಾಸೆ ನೆರವೇರುವುದು. ಮುಂದೆ ವಿದೇಶಗಳಿಗೆ ಹೋಗಿ ಬರುವ ಅವಕಾಶವೂ ಸಿಕ್ಕಬಹುದು. ಸಿಕ್ಕಿದರೆ...." ಗೋಪಿ ವಾಕ್ಯವನ್ನು ಅರ್ಧದಲ್ಲಿಯೇ ಮೊಟಕು ಮಾಡಿದ.

"ಸಿಕ್ಕಿದರೆ....ಅದರಿಂದ ಅವಳಿಗೆ ಏನು ಪ್ರಯೋಜನವಾಗುವುದು ಗೋಪಿ?"

"ವಿದೇಶಗಳಲ್ಲಿ....ಅದರಲ್ಲೂ ಅಮೇರಿಕಾ, ರಷ್ಯ ದೇಶಗಳಲ್ಲಿ ಪೋಲಿಯೋ ರೋಗಿಗಳಿಗೆ ಪೂರ್ಣ ಗುಣವಾಗುವಂತೆ ಶಸ್ತ್ರ ಚಿಕಿತ್ಸೆಯನ್ನು ಮಾಡುತ್ತಾರಂತೆ. ಮೊನ್ನೆ ನನ್ನ ಸ್ನೇಹಿತನ ಅಕ್ಕ ಅಲ್ಲಿ ಶಸ್ತ್ರ ಚಿಕಿತ್ಸೆ ಹೊಂದಿ ಕುಂಟುತ್ತಿದ್ದ ಕಾಲನ್ನು ಸರಿಪಡಿಸಿಕೊಂಡು ಇಂಡಿಯಾ ದೇಶಕ್ಕೆ ಬಂದಿದ್ದಾಳೆ."

"ನಿಜವಾಗಿ?"

ಗೋಪಿಯ ಮಾತು ಮುಕ್ತಾಯವಾಗುವುದರಲ್ಲಿ ಕುಮುದಳಿಂದ ಚಿಮ್ಮಿ ಬಂತು ಒಂದು ಪ್ರಶ್ನೆ. ಸಂತೋಷ ಹಾಗೂ ಆಶ್ಚರ್ಯದ ಮಿಶ್ರಣವಿತ್ತು, ಅವಳ ಚಿಮ್ಮಿದ ಆ ನಾಲ್ಕಕ್ಷರದ ಪ್ರಶ್ನೆಯಲ್ಲಿ. ವೀಳೆಯದೆಲೆಗೆ ಸುಣ್ಣ ಸವರುತ್ತಿದ್ದ ನಳಿನಿಯ ಕೈ ಅರಗಳಿಗೆ ತಟಸ್ಥವಾಯಿತು.

ಆದರೆ ಗಂಗ? ಗೋಪಿಯ ಮಾತು ಅವಳಿಂದ ಹೊರಹೊಮ್ಮಿಸಿದ ಪ್ರತಿಕ್ರಿಯೆ?

ಕುರ್ಚಿಯ ಬೆನ್ನಿಗೆ ಬೆನ್ನುಕೊಟ್ಟು ಆರಾಮದಿಂದ ಕುಳಿತಿದ್ದ ಗಂಗ ನೆಟ್ಟನೆ ಕುಳಿತುಕೊಂಡಳು. ಅವನ ಮಾತು ಕೇಳಿ ಉದ್ವೇಗಗೊಂಡಿದ್ದ ಅವಳ ಮನಸ್ಸು ಹೃದಯದ ಬಡಿತದ ವೇಗವನ್ನು ಹೆಚ್ಚಿಸಿತು.

"ಒಂದೆರಡು ಸುಳ್ಳುಗಳನ್ನು ನಾನು ಹೇಳಿರಬಹುದು. ಆದರೆ ಆ ವಿಷಯ ದಲ್ಲಿ ಸುಳ್ಳು ಹೇಳುತ್ತೇನೆಯೆ ಅಕ್ಕ ?"

ಗೋಪಿ ಗಂಭೀರ ಧ್ವನಿಯಲ್ಲಿ ಹೇಳಿದ.

"ಮೊದಲಿಗಿಂತ ಈಗ ಗಂಗೆಯ ಕಾಲಿಗೆ ಶಕ್ತಿ ಹೆಚ್ಚಿದೆ. ಆದರೆ ಕುಂಟುವ ಕಾಲನ್ನು ಸರಿಪಡಿಸುವುದು ಖಂಡಿತ ಸಾಧ್ಯವಿಲ್ಲವೆಂದು ಡಾಕ್ಟರು ಹೇಳಿಬಿಟ್ಟರು. ನೀನು ಹೇಳಿದಂತೆ ಗಂಗೆಗೆ ವಿದೇಶಕ್ಕೆ ಹೋಗುವ ಅದೃಷ್ಟವಿದ್ದರೆ...."

ಮಾತು ಮುಗಿಸುವ ಮೊದಲೇ ಹಗಲುಗನಸು ಕಾಣತೊಡಗಿದಳು ಕುಮುದ.

"ಈಗಲೂ ಪ್ರತಿದಿನ ವ್ಯಾಯಾಮ ಮಾಡ್ತೀಯಾ ಗಂಗ ?"

"ಹುಂ....ಮಾವ. ಕುಳಿತುಕೊಂಡು ಬಲಗಾಲಿಗೆ ಶಕ್ತಿ ಬರುವಂತಹ ಕೆಲವು ವ್ಯಾಯಾಮಗಳನ್ನು ಡಾಕ್ಟರ್ ನನಗೆ ಹೇಳಿಕೊಟ್ಟಿದ್ದಾರೆ...."

"ವ್ಯಾಯಾಮದಿಂದ ನಿನ್ನ ಕಾಲಿಗೆ ಶಕ್ತಿ ತುಂಬಿ ಬರಬೇಕು. ಆದರೆ ಹೆಚ್ಚಿನ ವ್ಯಾಯಾಮದಿಂದ ನಿನ್ನ ದೇಹಕ್ಕೆ ಆಯಾಸಮಾಡಿಕೊಳ್ಳಬೇಡ...."

ನಳಿನಿ ಒಂಭತ್ತು ಎಲೆಗಳನ್ನು ಬಾಯೊಳಗೆ ತುಂಬಿ, ಹತ್ತನೆಯ ವೀಳೆಯ ದೆಲೆಗೆ ಸಾವಧಾನದಿಂದ ಸುಣ್ಣ ಸವರುತ್ತಿದ್ದಳು.

"ನಳಿನಿ....ನೀನು ಹೊಗೇಸೊಪ್ಪು ಹಾಕ್ತೀಯಾ ?"

ಗೋಪಿ ಅವಳನ್ನು ರೇಗಿಸಿ, ಕೆರಳಿಸಿ, ಕುಣಿಸಲು ನಿರ್ಧರಿಸಿದ.

"ಓಹೋ....ತಂದುಕೊಟ್ಟರೆ ಹಾಕಿಕೊಳ್ಳದೇ ಇರ್ತೀನೇನು ?"

ನಳಿನಿ ಕೆರಳಿ ಕೆಂಡವಾಗದೆ ಇದ್ದರೂ ಅವಳ ಮನಸ್ಸು ಆವನ ಪ್ರಶ್ನೆಯನ್ನು ಕೇಳಿ ಬೂದಿ ಮುಚ್ಚಿದ ಕೆಂಡದಂತಿತ್ತು. ಅವಳ ಶಾಂತಸ್ವರವನ್ನು ಗಮನಿಸಿದ ಗೋಪಿ ಪೆಚ್ಚಾದ.

"ನೀನೂ ಪ್ರತಿದಿನ ವ್ಯಾಯಾಮ ಮಾಡ್ಬಾರದೇ ನಳಿನಿ ?"

ಭಾವೀ ಹೆಂಡತಿಯನ್ನು ಕೆರಳಿಸಬೇಕೆಂದೇ ಪಣತೊಟ್ಟಿದ್ದ ಗೋಪಿ ಅವಳ ಸಹನೆಯ ಕೋಟೆಯನ್ನು ಒಡೆಯಲು ಬೇರೊಂದು ಉಪಾಯ ಯೋಚಿಸಿದ.

"ಯಾಕೋ ?"

ನಳಿನಿಯ ಧ್ವನಿಯನ್ನು ಗಮನಿಸಿದ ಗೋಪಿಗೆ ಅವಳು ಸಿಟ್ಟಿನ ಮೊದಲನೆ ಮೆಟ್ಟಲಿನಲ್ಲಿದ್ದಾಳೆಂದು ತಿಳಿಯಿತು. ಅದರಿಂದ ಅವನ ಹೊಟ್ಟೆಗೆ ಹಾಲೆರೆ ದಂತಾಯಿತು. ಆದರೆ ಅಷ್ಟರಿಂದಲೇ ಅವನಿಗೆ ತೃಪ್ತಿಯಾಗಲಿಲ್ಲ.

ಸಿಟ್ಟಿನಿಂದ ಅಬ್ಬರಿಸಿ ಕಿರುಚುವ ಭಾವಿ ಹೆಂಡತಿಯ ಕೆರಳಿದ ಮುಖವನ್ನು ನೋಡಿ ಸಂಭ್ರಮಪಡುವ ಬಯಕೆಯಾಯಿತು ಕಿಲಾಡಿ ಗೋಪಿಗೆ.

"ಯಾಕೆ? ಒಳ್ಳೇ ಪ್ರಶ್ನೆ....ಪೂತನಿ ಹಾಗಿರುವ ನೀನು ವ್ಯಾಯಾಮ ಮಾಡಿ ಸ್ವಲ್ಪ ಮೈ ಕರಗಿಸಿಕೊಳ್ಳಬಾರ್ದು ಅಂತ...."

"ಪೂತನಿ!" ನಳಿನಿ ಕೋಪದಿಂದ ತುಟಿಕಚ್ಚಿದಳು.

ಅವಳ ಉಗ್ರ ಸ್ವರೂಪದ ಎರಡನೆಯ ಅವತಾರವನ್ನು ಗೋಪಿ ಮನದಣಿಯೆ ನೋಡಿ ಮನಸ್ಸಿನಲ್ಲೇ ಹಿಗ್ಗಿದ.

"ಹುಂ....ಪೂತನಿ ವರ್ಣನೆ ರಾಮಾಯಣದಲ್ಲಿ ಎಷ್ಟು ಚೆನ್ನಾಗಿ ಬರೆದಿದ್ದಾರೆ! ವರ್ಣನೆ ಓದಿ ನೋಡಿದ್ದರೂ ಅವಳ ದರ್ಶನ ನನಗಿನ್ನೂ ಆಗಿರಲಿಲ್ಲ. ಈಗ....ನಿನ್ನನ್ನು ನೋಡಿದ ಮೇಲೆ ಪೂತನಿ ಹೇಗಿದ್ದಳು ಎನ್ನುವುದನ್ನು ನಾನು ಸುಲಭವಾಗಿ ಊಹೆ ಮಾಡಬಲ್ಲೆ...."

"ಸರಿಯಾಗಿ ಹೇಳಿದೆ ಮಾವ...."

ಗಂಗ ಗೋಪಿಯ ಮಾತನ್ನು ಕೈ ಚಪ್ಪಾಳೆ ತಟ್ಟಿ ಅನುಮೋದಿಸಿದಳು.

"ಅಮ್ಮಾ....ನೋಡಮ್ಮಾ....ಗೋಪಿ ನನ್ನ ಪೂತನಿ ಅಂತಾನೆ...."

ನಳಿನಿ ಲಕ್ಷ್ಮಣನ ಕೈಯಿಂದ ಕಿವಿ, ಮೂಗುಗಳನ್ನು ಕುಯ್ಯಿಸಿಕೊಂಡ ಪೂತನಿಯಂತೆಯೇ ಅಬ್ಬರಿಸಿದಳು.

"ಏನ್ರೋ ಅದು ಗಲಾಟೆ...."

ಕೋರ್ಟಿನಿಂದ ಅದೇ ತಾನೇ ಮನೆಗೆ ಹಿಂತಿರುಗಿದ್ದ ಮಾಧವ ಹಜಾರದಲ್ಲಾಗುತ್ತಿದ್ದ ಗಲಾಟೆಯನ್ನು ಕೇಳಿ ಗಾಬರಿಗೊಂಡ.

"ನೋಡಣ್ಣ....ಗೋಪಿ ನನ್ನ ಪೂತನಿ ಅಂತಾನೆ...."

ನಳಿನಿ ಗೋಪಿಯತ್ತ ಕೈ ತೋರಿಸಿ ತಂದೆಯಲ್ಲಿ ದೂರುಕೊಟ್ಟಳು.

"ಪೂತನಿ ಅಂದರೆ ನಿನಗೆ ಆದ ನಷ್ಟವೇನು?"

ತಂದೆಯೂ ಗೋಪಿಯ ಪರ ಮಾತನಾಡಿದ ಮೇಲೆ ನಳಿನಿಯ ಸಿಟ್ಟು ಶಿಖರದ ತುದಿಯನ್ನು ಮುಟ್ಟಿತು. ಕೋಪ ಕಣ್ಣೀರಾಗಿ ಪರಿವರ್ತಿಸಿತು.

ನಳಿನಿ ಸೋಲಿನ ಸಂಕೇತವಾದ ಕಣ್ಣೀರನ್ನು ಗಂಡಸರೆದುರು ಹರಿಸಬಾರದೆಂದು ತನ್ನ ರೂಮಿಗೆ ಓಡಿ ಹೋದಳು. ಅವಳ ಬೆನ್ನ ಹಿಂದೆಯೆ ಓಡಿದ ಗೋಪಿ, ನಳಿನಿ ರೂಮಿನ ಬಾಗಿಲು ಹಾಕುವುದರೊಳಗಾಗಿ ಆ ರೂಮಿನ ಒಳಗಡೆ ಸುರಕ್ಷಿತವಾಗಿ ಕಾಲೂರಿದ್ದ.

ನಳಿನಿ ಮಂಚದ ಮೇಲಿದ್ದ ಮೆತ್ತೆಯ ಮೇಲೆ ಬೋರಲಾಗಿ ಮಲಗಿದಮೇಲೆ ಕಣ್ಣಿನಲ್ಲಿ ತಡೆ ಹಾಕಿ ನಿಲ್ಲಿಸಿದ್ದ ಕಣ್ಣೀರಿಗೆ ಸ್ವಾತಂತ್ರ್ಯ ಕೊಟ್ಟಳು. ಬಿಕ್ಕಿ ಬಿಕ್ಕಿ ಅಳುತ್ತಿದ್ದ ನಳಿನಿಯನ್ನು ಕಂಡು ಗೋಪಿಗೆ ಪಶ್ಚಾತ್ತಾಪವಾಯಿತು. ಅವಳ ಚಂಚಲವಾದ ಕಣ್ಣುಗಳಲ್ಲಿ ನೀರು ತರಿಸಿ ನೋಡುವ ಅವನ ಆಸೆ ನೆರವೇರಿದ ಮೆ ಲೆ ಅವನ ಎದೆ ಕರಗಿತು.

"ನಳಿನಿ...." ಅವಳ ಮುಖವನ್ನು ತನ್ನ ಕಡೆ ತಿರುಗಿಸಿಕೊಳ್ಳುವ ಪ್ರಯತ್ನ ಮಾಡಿ ವಿಫಲನಾದ ಗೋಪಿ.

"ಇನ್ನು....ಮೇಲೆ....ನನ್ನನ್ನು ನೀನು ಮಾತನಾಡಿಸಬೇಡ...."

ಅಳುವಿನ ನಡುವೆ ಬಿಕ್ಕಿದಳು ನಳಿನಿ.

"ತಪ್ಪಾಯ್ತು ನಳಿನಿ...."

ಗೋಪಾಲ ಮಂಚದ ಮೇಲೆ ಮಲಗಿ ಅಳುತ್ತಿದ್ದ ನಳಿನಿಯ ಬಳಿ ನೆಲದ ಮೇಲೆ ಮಂಡಿಯೂರಿ ಕುಳಿತು ಕೈಮುಗಿದು ಬೇಡಿಕೊಂಡ.

"ಊಂ....ಊಂ....ಇನ್ನೊಂದು ದಿವಸವೂ ನನ್ನನ್ನು ನೀನು ಕೀಟಲೆ ಮಾಡಿ ರೇಗಿಸಬಾರದು...."

ಕೈಯ ಹಿಡಿಯಲ್ಲಿದ್ದ ಗೋಪಾಲನ ಜುಟ್ಟಿನ ಬಿಗಿತವನ್ನು ಬಲಗೊಳಿಸಲು ನಳಿನಿ ಆ ಸಂದರ್ಭವನ್ನು ಉಪಯೋಗಿಸಿಕೊಂಡಳು.

"ರೇಗಿಸಿದರೆ ನೀನು ರೇಗಾಡಬೇಕೇನು ?"

ಗೋಪಾಲ ಮತ್ತೆ ತನ್ನ ಬಾಲವನ್ನು ಬಿಚ್ಚಿದ.

"ಹೋಗು....ಇನ್ಮೇಲೆ ನನ್ನ ಸುದ್ದಿಗೆ ಬರಬೇಡ...."

ಸೊಂಟವನ್ನು ಬಳಸಿ ಹಿಡಿದಿದ್ದ ಗೋಪಾಲನ ತೋಳುಗಳನ್ನು ಕೋಪದಿಂದ ನಳಿನಿ ಕಿತ್ತೆಸೆದಳು.

"ನೀನು ಹಾಗೆ ಹೇಳಿಬಿಟ್ಟರೆ ಈ ಬಡವನ ಗತಿ....?"

ಹೃದಯ ನಗುತ್ತಿದ್ದರೂ, ಮುಖದ ಮೇಲೆ ಎಲ್ಲಿಲ್ಲದ ಗಾಂಭೀರ್ಯದ ತೆರೆಯನ್ನೆಳೆದುಕೊಂಡು ಕೇಳಿದ ಗೋಪಾಲ.

"ನಿನ್ನ ಪಾಡು...."

ನಳಿನಿ ಅವನೊಡನೆ ಬಿರುಸಿನ ಮಾತುಕತೆಗಳನ್ನಾಡುತ್ತಾ ತನ್ನ ಅಳುವನ್ನು ಸಂಪೂರ್ಣವಾಗಿ ಮರೆತುಬಿಟ್ಟಳು. ಅವ್ಯಾಹತವಾಗಿ ಹರಿದು ಬರುತ್ತಿದ್ದ ಅವಳ ಕಣ್ಣೀರು ನಿಂತಾಗಲೇ ಗೋಪಾಲನಿಗೆ ಸಮಾಧಾನ.

"ಇನ್ನೂ ನನ್ನ ಮೇಲೆ ಸಿಟ್ಟೇನು ?"

ನಳಿನಿಯಿಂದ ಪ್ರತ್ಯುತ್ತರವಿಲ್ಲ.

"ಸಮಾಧಾನ ಪಡಿಸಬೇಕಾದರೆ ನಾನೇನಾದರೂ ನಿನಗೆ ಕೊಡಕೇನು ?"

ಉಹುಂ....ಅದಕ್ಕೂ ಅವಳಿಂದ ಜವಾಬಿಲ್ಲ.

"ನಿನ್ನ ಕೆನ್ನೆಯ ಮೇಲೆ ಆರದೆ ನಿಂತಿರುವ ಕಣ್ಣೀರನ್ನು ಒರಿಸಲೇನು ?"

ಗೋಪಾಲ ಮುಂದೆ ಬಾಗಿದ. ಆಗ ನಳಿನಿಯ ಮುಖದಲ್ಲಿ ಮಂದಹಾಸದ ಣವೊಂದು ಅವಳ ದುಗುಡ ತುಂಬಿದ ಮುಖದಲ್ಲಿ ಕಂಡಿತು.

"ದೇವಿ ಪ್ರಸನ್ನಳಾದಳು. ಭಕ್ತ ಉದ್ಧಾರವಾದ...."

ಗೋಪಾಲ ಮತ್ತೆ ಕೈ ಜೋಡಿಸಿದ.

"ನಿಲ್ಲಿಸಪ್ಪ ನಿನ್ನ ನಾಟಕಾನ...."

ನಳಿನಿ ತನ್ನ ದೇಹದಲ್ಲಿದ್ದ ಶಕ್ತಿಯನ್ನೆಲ್ಲಾ ಒಂದುಗೂಡಿಸಿ ಅದನ್ನೆಲ್ಲಾ ರಳ ಬಿಗಿದ ಮುಷ್ಟಿಯಲ್ಲಿಟ್ಟು ಗೋಪಾಲನ ಬೆನ್ನಿನ ಮೇಲೆ ಗುದ್ದಿದಳು.

"ಅಬ್ಬಾ ! ನಿಂದು ಬರೀ ಥಡೂತಿ ಮೈ ಅಂತಿದ್ದೆ, ತಕ್ಕಮಟ್ಟಿಗೆ ದೇಹ ಲ್ಲಿ ಶಕ್ತೀನೂ ತುಂಬಿಟ್ಟಿದೀಯಾ ಪರವಾಗಿಲ್ಲ....!"

ಏಟು ಬಿದ್ದ ಜಾಗವನ್ನು ಮೃದುವಾಗಿ, ಹಿತವಾಗುವಂತೆ, ನೋವು ಾಯವಾಗುವಂತೆ ನೇವರಿಸಿಕೊಳ್ಳುತ್ತಾ ಆಶ್ಚರ್ಯವನ್ನು ವ್ಯಕ್ತಪಡಿಸಿದ ೋಪಾಲ.

"ನೋಡದ್ಯಾ....ಮತ್ತೆ ಕೀಟಲೆ ಮಾಡೋದಕ್ಕೆ ಪ್ರಾರಂಭಮಾಡಿ ್ಯೆಲ್ಲಾ ?"

"ಇಲ್ಲ....ತಪ್ಪಾಯ್ತು...."

ಪ್ರತ್ಯಕ್ಷಳಾದ ಸಾಕ್ಷಾತ್ ದೇವಿಯು ಮತ್ತೆ ಮುನಿದು ಮಾಯವಾಗುವ ನೋ ಎಂದು ಭಯದಿಂದ ಹೆದರಿ ತಲ್ಲಣಿಸುವ ಭಕ್ತನಂತೆ ನಳಿನಿಯ ಕ್ಷಮೆ ಡಿದ ಗೋಪಾಲ.

ಅವಳ ಪ್ರಸನ್ನತೆ ಮಾಯವಾಗಿ ಉಗ್ರಸ್ವರೂಪಿಣಿಯಾಗುವಳೇನೋ ನ್ನುವ ದಿಗಿಲು ಅವನಿಗೆ.

"ಗೋಪಿ....ತಿಂಡೀಗೆ ಬರ್ತೀಯಾ ?"

ಗೋಪಿಗೆ ಅಕ್ಕನಿಂದ ತಿಂಡಿಗೆ ಕರೆ ಬಂದಿದ್ದರೂ, ನಳಿನಿ ಅವನಿಗಿಂತ ುಂದಾಗಿ ಅಡಿಗೆ ಮನೆಯ ಕಡೆ ಧಾವಿಸಿದಳು.

"ಇಬ್ಬರಿಗೂ ರಾಜಿ ಆಯ್ತೇನು? ಮದುವೆಗಿಂತ ಮುಂಚೆಯೇ ಹೀಗೆ ಜಗಳಾಕಾದ್ರೆ, ಮದುವೆ ಆದ ಮೇಲೆ ಏನು ಗತಿ?"

"ಅದಕ್ಕೇ ನಾವಿಬ್ಬರೂ ಈಗಲೇ ಜಗಳಗಳನ್ನೆಲ್ಲಾ ಆಡಿ ಮುಗಿಸಿಬಿಡ್ತೀವಿ. ಮದುವೆಯಾದ ಮೇಲೆ ಸಂತೋಷವಾಗಿ ಇರಬಹುದು ಅಂತ...."

ಗೋಪಿ ರವೆ ಉಂಡೆಯನ್ನು ಬಾಯೊಳಗಿಡುತ್ತಾ ಅಕ್ಕನಿಗೆ ಹೇಳಿದ.

* * * *

ಮನೆಯಲ್ಲೇ ಕುಳಿತು ವಿದ್ಯಾಭ್ಯಾಸವನ್ನು ಮುಂದುವರಿಸುತ್ತಿದ್ದರೂ ಗಂಗೆಗೆ ಎಲ್ಲ ವಿದ್ಯಾರ್ಥಿಗಳಂತೆ ಶಾಲೆಗೆ ಹೋಗಿ ಕಲಿಯುವ ಆಸೆಯಿತ್ತು. ಅವಳಾಸೆ ನೆರವೇರುವಂತಾಯಿತು. ಗಂಗ ಹೈಸ್ಕೂಲು ಮುಗಿಸಿ ಕಾಲೇಜಿಗೆ ಸೇರಿದ್ದಳು. ಕೋಲಿನ ಸಹಾಯವಿಲ್ಲದೆ ಕುಂಟುತ್ತಾ ನಡೆಯುವಷ್ಟು ಶಕ್ತಿ ಅವಳ ಕಾಲಿಗೆ ಬಂದಿತ್ತು. ಅಷ್ಟು ಶಕ್ತಿಯನ್ನು ಅವಳ ಬಲಗಾಲಿಗೆ ತುಂಬಿಕೊಳ್ಳಲು ಗಂಗ ಪಟ್ಟ ಶ್ರಮ? ಅವಳು ಮಾಡಿದ ಪ್ರಯತ್ನಗಳು? ಗಂಗ ಪಟ್ಟ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯಿತು.

ಜಟಕಾ ಗಾಡಿಯೊಂದು ಪ್ರತಿದಿನವೂ ಅವಳನ್ನು ಕಾಲೇಜಿಗೆ ಕರೆದುಕೊಂಡು ಹೋಗಿ ಬಿಡುತ್ತಿತ್ತು.

ಮೊದಲನೆಯ ದಿನ ಗಂಗ ಕಾಲೇಜಿಗೆ ಹೊರಡುವಾಗ ಮನೆಯವರಿಗೆಲ್ಲಾ ಸಂಭ್ರಮ. ದೇಹದ ಬೆಳವಣಿಗೆ ವಯಸ್ಸಿಗೆ ತಕ್ಕಂತಿದ್ದರೂ, ಗಂಗ ಮಂಡಿ ಮುಚ್ಚುವ ಲಂಗಗಳನ್ನು ಮಾತ್ರ ಹಾಕುತ್ತಿದ್ದಳು. ಕುಂಟುತ್ತಾ ನಡೆಯುವ ಅವಳಿಗೆ ಸೀರೆಯ ನೆರಿಗೆಗಳೂ ಅಡಚಣೆಯಾಗುತ್ತಿದ್ದವು. ಆದ್ದರಿಂದ ಅವಳು ಸೀರೆಯನ್ನುಡುತ್ತಿರಲಿಲ್ಲ.

ಮನೆಯ ಮುಂದೆ ಗಾಡಿ ಬಂದು ನಿಂತಾಗ ಮಾಧವ ದೇವರ ಮುಂದೆ ಕುಳಿತು ಕೈ ಮುಗಿಯುತ್ತಿದ್ದ ಮಗಳನ್ನು ಕಂಡ. ಅವನ ಕಣ್ಣು ತುಂಬಿ ಬಂದು, ಮಂಜಾಗಿ, ಮುಂದಿದ್ದ ಮಗಳೂ ಕಣ್ಣಿಗೆ ಕಾಣಿಸದಂತಾದಳು.

"ಗಂಗ....ಗಾಡಿ ಬಂದಿದೆ, ಕಾಲೇಜಿಗೆ ಹೊರಡ್ತೀಯಾ?"

"ಹೂಂ....ಅಣ್ಣ...."

ಗಂಗ ಕುಂಟುತ್ತಲೇ ತನ್ನ ದೇಹವನ್ನು ಸಂಭ್ರಮದಿಂದ ಮನೆಯ ಹೊರಗೆ ಎಳೆದು ತಂದಳು. ಉದ್ವೇಗದಿಂದ ಅವಳ ಮುಖ ಓಕಳಿ ಎರಚಿದಂತಾಗಿತ್ತು.

ಗಾಡಿಯನ್ನು ಹತ್ತಿ, ಗೇಟಿನ ಬಳಿ ನಿಂತಿದ್ದ ಮನೆಯವರೆಲ್ಲರಿಗೂ ಗಂಗ ಮರೆಯಾಗುವವರೆಗೆ ಕೈ ಬೀಸಿದಳು. ಪದ್ಮಜ ಗಂಗೆಯ ಕಾಲೇಜಿನಲ್ಲೇ ಓದು

ತ್ತಿದ್ದ ಹುಡುಗಿ. ಅವಳ ಮನೆಯೂ ಸಮೀಪದಲ್ಲಿದ್ದುದರಿಂದ, ಅವಳೂ ಗಾಡಿಯಲ್ಲಿ ಗಂಗೆಯ ಜೊತೆಯಲ್ಲಿ ಕಾಲೇಜಿಗೆ ಹೋಗಿ ಬರುತ್ತಿದ್ದಳು.

ಬಣ್ಣ ಬಣ್ಣದ ಸೀರೆಗಳನ್ನುಟ್ಟು ಕಾಲೇಜಿನ ಆವರಣದಲ್ಲೆಲ್ಲಾ ಓಡಾಡುತ್ತಿದ್ದ ಹುಡುಗಿಯರನ್ನು ನೋಡಿದಾಗ ಗಂಗೆಗೆ ಉದ್ಯಾನವನದಲ್ಲಿ ವಿಹರಿಸುವ ಬಣ್ಣದ ಚಿಟ್ಟೆಗಳ ನೆನಪಾಯಿತು. ಪದ್ಮಜ ಕೈ ಕೊಟ್ಟು ನಿಧಾನವಾಗಿ ಗಂಗೆಯನ್ನು ಗಾಡಿಯಿಂದ ಕೆಳಗೆ ಇಳಿಸಿಕೊಂಡಳು.

ಗಂಗ ನಿಧಾನವಾಗಿ ಕುಂಟುತ್ತಾ ತರಗತಿಗೆ ಹೋಗುವಷ್ಟರಲ್ಲಿ ಗಂಟೆ ಹೊಡೆಯಿತು. ಹುಡುಗಿಯರೆಲ್ಲಾ ತರಗತಿಗಳಿಗೆ ಓಡಿದರು.

"ನಾವು ಒಳಕ್ಕೆ ಬರಬಹುದೆ?"

ಪದ್ಮಜ ತರಗತಿಯಲ್ಲಿದ್ದ ಟೀಚರನ್ನು ಕೇಳಿದಳು. ಕುಳಿತಿದ್ದ ಹುಡುಗಿಯರೆಲ್ಲಾ ಬಾಗಿಲ ಬಳಿ ನಿಂತಿದ್ದ ಹುಡುಗಿಯರಿಬ್ಬರ ಕಡೆ ಕತ್ತು ಹೊರಳಿಸಿದರು.

ಸುಮಾರು ಹದಿನೇಳು, ಹದಿನೆಂಟು ವಯಸ್ಸಿನ ಹುಡುಗಿಯೊಬ್ಬಳು ಲಂಗ, ಅದೂ ಮಂಡಿ ಮುಚ್ಚುವವರೆಗಿದ್ದ ಲಂಗ ಹಾಕಿಕೊಂಡು ನಿಂತಿರುವುದನ್ನು ಅವರೆಲ್ಲರೂ ನೋಡಿ ಆಶ್ಚರ್ಯಪಟ್ಟರು. ಅವಳ ಕೈಯೊಳಗಿದ್ದ ದಪ್ಪನೆಯ ಕೋಲುಗಳನ್ನೇ ಅವರೆಲ್ಲರೂ ನುಂಗುವಂತೆ ನೋಡಿದರು.

ಗಂಗ ವಿದ್ಯಾಭ್ಯಾಸ ಮಾಡುತ್ತಿದ್ದ ಊರು ಮಂಡ್ಯ. ಒಂದು ಹುಡುಗಿ ಮುಖಕ್ಕೆ ಸ್ವಲ್ಪ ಪೌಡರ್ ಹಾಕಿಕೊಂಡು ಹೊಸ ಸೀರೆಯನ್ನುಟ್ಟು ನಡೆದರೆ, ಬೀದಿಯ ಜನವೆಲ್ಲಾ ಅವಳನ್ನು ಆಡಿಕೊಂಡು ನಗುತ್ತಿದ್ದರು ಆ ಊರಿನಲ್ಲಿ. ಇನ್ನು ಪ್ರಾಯದ ಹುಡುಗಿ ಲಂಗ ಹಾಕಿರುವುದನ್ನು ನೋಡಿದಾಗ ಅವರಿಗೆ ಆಶ್ಚರ್ಯವಾಗದಿದ್ದರೆ ಅದು ಪರಮಾಶ್ಚರ್ಯ!

ಅದೇ ಉಡುಪು ಧರಿಸಿ ಬೊಂಬಾಯಿಯ ತುಂಬಿದ ಬೀದಿಗಳಲ್ಲಿ ಗಂಗ ಒಂಟಿಯಾಗಿ ಓಡಾಡಿದ್ದರೆ ಯಾರೂ ಅವಳ ಕಡೆ ತಿರುಗಿ ನೋಡಿಯೂ ಸಹ ನೋಡುತ್ತಿರಲಿಲ್ಲ.

ನುಂಗುವಂತೆ ತನ್ನನ್ನೇ ನೋಡುತ್ತಿರುವ ಹುಡುಗಿಯರನ್ನು ಕಂಡಾಗ ಗಂಗೆಗೆ ನಾಚಿಕೆಯಾಯಿತು. ಅವಳಿಗೆ ಆ ಗಳಿಗೆಯಲ್ಲೇ ಭೂಮಿ ಬಾಯ್ಬಿಟ್ಟು ತನ್ನನ್ನು ನುಂಗಬಾರದೆ ಎಂದೆನಿಸಿತು.

ಪದ್ಮಜ ಸರಸರನೆ ಹೆಜ್ಜೆ ಹಾಕಿ ಜಾಗವಿದ್ದ ಕಡೆ ಹೋಗಿ ಕುಳಿತುಕೊಂಡಳು. ಆದರೆ ಗಂಗ?

ಸರಸರನೆ ಹೆಜ್ಜೆ ಹಾಕುವುದು ಅವಳ ಕುಂಟು ಕಾಲಿಂದ ಸಾಧ್ಯವೆ? ಗಂಗ

ನಿಧಾನವಾಗಿ ಕುಂಟುತ್ತಾ ಕೋಲೂರಿಕೊಂಡು ರೂಮಿನ ಒಳಗಡೆ ಹೆಜ್ಜೆ ಹಾಕಿ, ಪದ್ಮಜಳ ಪಕ್ಕದಲ್ಲಿ ಕುಳಿತುಕೊಂಡಳು.

ತರಗತಿಯಲ್ಲಿದ್ದ ಹುಡುಗಿಯರೆಲ್ಲರ ದೃಷ್ಟಿ ಗಂಗಳ ಕಾಲುಗಳ ಮೇಲಿತ್ತು. ಪಾಠವನ್ನು ಅದೇ ತಾನೆ ಪ್ರಾರಂಭಿಸಿದ್ದ ಉಪಾಧ್ಯಾಯರೂ ಸಹ ತಮ್ಮ ಮಾತು ನಿಲ್ಲಿಸಿ ಗಂಗಳನ್ನೇ ನೋಡುತ್ತಿದ್ದರು. ಇವರೆಲ್ಲರ ಕಣ್ಣಿನ ತೀಕ್ಷ್ಣ ನೋಟಕ್ಕೆ ಸಿಕ್ಕಿ ಗಂಗ ನಾಚಿ ನೀರಾಗಿ ಹೋದಳು. ಪದ್ಮಜಳ ಪಕ್ಕದಲ್ಲಿ ಕುಳಿತುಕೊಂಡಾಗ, ಪದ್ಮಜ ಪಿಸುಗುಟ್ಟಿದಳು.

"ಕೆನ್ನೆ ಮೇಲೆ ನೀರು ಹರಿಯುತ್ತಿದೆ ಗಂಗ. ಕರವಸ್ತ್ರ ತೆಗೆದುಕೊಂಡು ಒರಸಿಕೊ...."

ಗಂಗ ಹಿಡಿಯಲ್ಲಿ ಮುದ್ದೆಯಾಗಿದ್ದ ಬಿಳಿಯ ಕರವಸ್ತ್ರದಿಂದ ಬೆವರಿದ್ದ ಹಣೆ, ಹಾಗೂ ಕೆನ್ನೆಗಳನ್ನು ಒರಸಿಕೊಂಡಳು. ಅವಳ ಕೈ ಕಂಪಿಸುತ್ತಿರುವುದನ್ನು ಪದ್ಮಜ ಗಮನಿಸಿದಳು.

ಕುಂಟುತ್ತಾ ನಡೆಯುವ ಹುಡುಗಿಯನ್ನು ಇತರ ಹುಡುಗಿಯರು ಕಣ್ಮರೆಯಾಗುವವರೆಗೆ ನೋಡುತ್ತಿದ್ದರು. ಈ ಅನುಭವಕ್ಕೆ ಗಂಗ ಕ್ರಮೇಣ ಹೊಂದಿಕೊಂಡಳು. ಸಂಕೋಚದಿಂದ ಒಂದು ಹಿಡಿಯಾಗುತ್ತಿದ್ದ ಅವಳ ದೇಹ ಒರಟಾಯಿತು. ಗಂಗ ಹುಡುಗಿಯರೆಲ್ಲರಿಗೂ ಕ್ರಮೇಣ ಪರಿಚಿತಳಾದಳು. ಬೆರಗುಗಣ್ಣುಗಳಿಂದ ನಿಂತು ನೋಡುತ್ತಿದ್ದ ಹುಡುಗಿಯರು ಕ್ರಮೇಣ ಗಂಗೆ ತಮ್ಮ ಸಮೀಪದಲ್ಲಿದ್ದಾಗಲೂ ಅವಳ ಕಡೆ ತಿರುಗಿ ನೋಡುವುದನ್ನೂ ಸಹ ನಿಲ್ಲಿಸಿದರು.

ಅನೇಕ ಹುಡುಗಿಯರ ಪರಿಚಯವಾದ ಮೇಲೆ, ಕಾಲೇಜಿನ ವಾತಾವರಣ ಹಿಡಿಸಿದ ಮೇಲೆ, ಗಂಗ ವಿದ್ಯಾರ್ಥಿ ಜೀವನದ ಸವಿಯನ್ನು ಆನಂದದಿಂದ ಚಪ್ಪರಿಸತೊಡಗಿದಳು. ಹಲವು ಹುಡುಗಿಯರ ಪರಿಚಯ ಅವಳಿಗಾಯಿತು. ಒಂಟಿತನ, ಬೇಸರ, ಮನಸ್ಸಿನಲ್ಲಿದ್ದ ಕೊರಗು, ಗಂಗಳ ಮನಸ್ಸಿನಿಂದ ದೂರ ದೂರಕ್ಕೆ ಸರಿದು ಹೋದವು. ಮೋಡ ಚದುರಿ ಆಕಾಶ ನಿರ್ಮಲವಾದಂತೆ ಅವಳ ಮನಸ್ಸು ಪ್ರಫುಲ್ಲಿತಗೊಂಡಿತು.

* * * *

ಮಾಧವ ಮಗಳ ಮದುವೆಯನ್ನು ವಿಜೃಂಭಣೆಯಿಂದಲೇ ಮಾಡಿ ಮುಗಿಸಿದ. ಹೆಚ್ಚು ಕಷ್ಟವಿಲ್ಲದೆ ಓದಿದ, ಒಳ್ಳೆಯ ಕೆಲಸದಲ್ಲಿದ್ದ, ಗುಣವಂತನಾದ ಹುಡುಗನೊಬ್ಬನಿಗೆ ಮಗಳನ್ನು ಧಾರೆ ಎರೆದು ಕೊಟ್ಟು ನೆಮ್ಮದಿಯಿಂದ ಉಸಿರಾಡಿದ. ಹಣವನ್ನು ಶಕ್ತಿ ಮೀರಿ ಖರ್ಚುಮಾಡಿದ. ಕಾರಣ....ಇದೊಂದು

ಮದುವೆ ತಾನೇ ಮಾಡೋದು ? ಎಂಬ ವಿಷಯ ಅವನಿಗೆ ಸ್ಪಷ್ಟವಾಗಿ ಗೋಚರವಾಗಿತ್ತು.

"ಗೋಪಿಗೆ ಗಡಿಯಾರ ಬೇಡವಂತೆ....'ನನ್ನ ಹತ್ತಿರ ಗಡಿಯಾರ ಇದೆ' ಎಂದು ಹೇಳಿದ."

ಕುಮುದ ಮದುವೆಗೆ ಮುಂಚೆ ಗೋಪಿಯ ಮಾತನ್ನು ಗಂಡನ ಮುಂದಿಟ್ಟಳು. ಕೈ ತುಂಬಾ ಸಂಪಾದಿಸುತ್ತಿದ್ದ ಗೋಪಿಗೆ ವರೋಪಚಾರ ಬೇಕಿರಲಿಲ್ಲ. ಮದುವೆಯೂ ಸಾಧ್ಯವಾದಷ್ಟು ಸರಳವಾದ ರೀತಿಯಲ್ಲಿ ನಡೆಯಲಿ ಎನ್ನುವಾಸೆ ಅವನಿಗೆ.

"ಅವನ ಗಡಿಯಾರಾನ ಗಡಿಯಾರ ಎಂದು ಯಾರು ಕರೆಯುತ್ತಾರೆ ? ಅವನು ಗಡಿಯಾರ ಕಟ್ಟಿಕೊಂಡಿರುವುದನ್ನು ನಾನು ಒಂದು ದಿನವೂ ನೋಡೇ ಇಲ್ಲ. ಯಾವಾಗಲೂ ಕೆಟ್ಟು ಮೂಲೇಲಿ ಬಿದ್ದಿರುವುದೇನೋ ?"

"ನಿಮ್ಮ ಮಾತು ನಿಜ....ಅವನ ಗಡಿಯಾರ ದಿವಸಕ್ಕೆ ಎರಡು ಸಲ ಸರಿಯಾದ ಕಾಲ ತೋರಿಸುತ್ತದೆ. ಬೆಳಗ್ಗೆ ಹನ್ನೆರಡು ಗಂಟೆ, ರಾತ್ರಿ ಹನ್ನೆರಡು ಗಂಟೆ...."

ಕುಮುದಳ ನಗು ಮಾಧವನ ನಗುವಿನೊಂದಿಗೆ ಬೆರೆಯಿತು.

"ಅವನ ಮಾತು ಕೇಳೋರು ಯಾರು ? ನಾನೂರು ರೂಪಾಯಿ ಕೊಟ್ಟು ಬೊಂಬಾಯಿಯಿಂದ ಸೊಗಸಾದ ಗಡಿಯಾರ ತಂದಿದೀನಿ...."

"ಅವನು ಬೇಡಾ ಅಂದರೆ ?" ಕುಮುದ ಸಂಶಯದಿಂದ ಹುಬ್ಬೇರಿಸಿದಳು.

"ಅವನು ಗಡಿಯಾರ ಬೇಡಾಂದ್ರೂ ಪರವಾಗಿಲ್ಲ....ಹುಡುಗಿ ಬೇಡ ಅಂತ ಅಂದೆ ಇದ್ದರೆ ಸಾಕು ಸಧ್ಯ ! ಕಿವಿ ಹಿಂಡಿ ಕೊಡ್ತೀನಿ ಗಡಿಯಾರಾನ....ಅದರ ಯೋಚನೆ ನಿನಗ್ಯಾಕೆ....ನನಗೆ ಬಿಡು...."

ಮೊದಲು ಪ್ರತಿಭಟಿಸಿದರೂ, ಅಕ್ಕ, ಭಾವನನ್ನು ಸಂತೋಷಪಡಿಸಲು, ಹಸೆಯ ಮೇಲೆ ಮೊಂಡತನದಿಂದ ಬೇಡವೆಂದು ತಿರಸ್ಕರಿಸಲು ಧೈರ್ಯಸಾಲದೆ ಹೋದುದರಿಂದಲೂ, ಗೋಪಿ ಮಾವ ಕೊಟ್ಟ ಗಡಿಯಾರವನ್ನು ಕೈಗೆ ಕಟ್ಟಿಕೊಂಡ. ಹಸೆಯ ಮೇಲೆ ಕುಳಿತು ಹತ್ತಾರು ಬಾರಿ ಅದರ ಕಡೆ ನೋಡುತ್ತಿದ್ದ ಗೋಪಿಯನ್ನು ಗಮನಿಸಿದ ಕುಮುದಳಿಗೆ ತೃಪ್ತಿಯಾಯಿತು.

ಹೂ ಮಾಲೆ ಹಾಕುವ ಸಂದರ್ಭದಲ್ಲಿ ನಳಿನಿಗೆ ಗಂಡನ ಕತ್ತು ಎಟುಕದೆ ಹೋಯಿತು. ನಳಿನಿ ಹೆಚ್ಚು ಎತ್ತರವಲ್ಲದ ಹುಡುಗಿ. ತೆಳ್ಳಗೆ ಎತ್ತರವಾಗಿದ್ದ

ಗೋಪಿಯನ್ನು ನೋಡಬೇಕಾದರೆ ಅವಳು ತಲೆಯನ್ನು ಎತ್ತಬೇಕಾಗಿತ್ತು. ನೆಟ್ಟನೆ ನಿಂತು ಮಡದಿ ಹಾಕುವ ಹೂ ಮಾಲೆಗಾಗಿ ಕಾದುನಿಂತ ಗೋಪಿ.

ನಳಿನಿಯ ಕೈಯಲ್ಲಿ ಹೂ ಮಾಲೆ ಉಳಿದಿತ್ತು.

ಗೋಪಿಯ ಜೋಳು ಕತ್ತು ಅವಳು ಹಾಕುವ ಮಾಲೆಗಾಗಿ ದಾರಿ ನೋಡುತ್ತಿತ್ತು. ಹೂ ಮಾಲೆ ಹಿಡಿದು ತಲೆ ತಗ್ಗಿಸಿ ನಿಂತುಕೊಂಡಳು ನಳಿನಿ.

"ಹೂವಿನ ಹಾರ ಹಾಕಮ್ಮಾ ತಾಯಿ...."

ವಯಸ್ಸಾದ ಪುರೋಹಿತರೊಬ್ಬರು ನಳಿನಿಯನ್ನು ಎಚ್ಚರಿಸಿದರು. 'ಉಹುಂ' ಅವರ ಮಾತಿಗೆ ನಳಿನಿಯ ಕೈಯಲ್ಲಿದ್ದ ಹೂ ಮಾಲೆ ಗೋಪಿಯ ಕತ್ತನ್ನು ಬಳಸಲಿಲ್ಲ.

"ಗೋಪಿಗೆ ಹಾರ ಹಾಕೋದಕ್ಕೆ ನಳಿನಿಗೆ ನಾಚಿಕೆಯೇನೋ ?"

ಸಮೀಪದಲ್ಲಿ ಕುಳಿತಿದ್ದ ನಳಿನಿಯ ದೊಡ್ಡಪ್ಪ ಹಾಸ್ಯಮಾಡಿದರು.

"ಗೋಪಿ....ಸ್ವಲ್ಪ ತಲೆ ಬಗ್ಗಿಸು....ಹಾರ ಹಾಕ್ತೀನಿ...."

ನಳಿನಿ ಪಿಸುಗುಟ್ಟಿದಳು. ಚಲಿಸಿದ ಅವಳ ತುಟಿಗಳನ್ನು ಹತ್ತಾರು ಜನ ಗಮನಿಸಿದರೂ, ಅವಳಾಡಿದ ಮಾತು ಗೋಪಿಯನ್ನುಳಿದು ಬೇರೆ ಯಾರಿಗೂ ಕೇಳಿಸಲಿಲ್ಲ.

"ಉಹುಂ....ಹೆಂಡತಿಗೆ ಕಂಡಿತವಾಗಿ ನಾನು ತಲೆ ತಗ್ಗಿಸುವುದಿಲ್ಲ...."

ಗೋಪಿ ಎಲ್ಲರಿಗೂ ಕೇಳಿಸುವಂತೆ ತನ್ನ ಅಭಿಪ್ರಾಯವನ್ನು ಕೊಟ್ಟ.

ಜನ ಸಮೂಹದಿಂದ ನಗುವಿನ ಬುಗ್ಗೆಗಳು ಹೊರಟವು. ನಗುವಿನ ಗಲಾಟೆಯಲ್ಲಿ ಪುರೋಹಿತರು ತಮ್ಮ ಬುದ್ಧಿಗೆ ಹೊಳೆದ ಉಪಾಯವೊಂದನ್ನು ಸೂಚಿಸಿದರು.

"ಮಾಧವರಾಯರೆ....ಒಂದು ಸ್ಟೂಲ್ ತಂದುಕೊಡಿ. ಅದರ ಮೇಲೆ ನಿಮ್ಮ ಮಗಳು ನಿಂತುಕೊಂಡು ಯಜಮಾನರಿಗೆ ಹಾರ ಹಾಕಲಿ."

"ಹೋ !" ಎಂದು ಅಟ್ಟಹಾಸದಿಂದ ಎಲ್ಲರೂ ನಕ್ಕರು.

ಎಲ್ಲರ ನಗುವಿಗೆ ನಾಯಕಿಯಾಗಿದ್ದ ನಳಿನಿ ನಾಚಿ ನೀರಾಗಿ ಹೋದಳು. ಹೆಂಡತಿಯನ್ನು ರಕ್ಷಿಸಲು ಗಂಡನೇ ಮುಂದೆ ಬಂದ. ಸಂಕೋಚದಿಂದ ಮುದುಡಿ ನಿಂತಿದ್ದ ಹೆಂಡತಿಗೆ ತಲೆ ಬಾಗಿಸಿ ನಿಂತ ಗೋಪಿ. ಅದಕ್ಕಾಗಿಯೇ ಕಾಯುತ್ತಿದ್ದ ನಳಿನಿ ಕೈಯೊಳಗಿದ್ದ ಹೂ ಮಾಲೆಯನ್ನು ಗಂಡನ ಕೊರಳಿಗೆ ಹಾಕಿದಳು. ನೆರೆದಿದ್ದ ಸಂಬಂಧಿಕರು, ಸ್ನೇಹಿತರು ಚಪ್ಪಾಳೆ ತಟ್ಟಿದರು.

ಭೂಮದ ಎಲೆಯ ಮುಂದೆ ದಂಪತಿಗಳು ಊಟಕ್ಕೆ ಕುಳಿತುಕೊಂಡರು.

ತ್ತುದಾದ ನಾಲ್ಕು ಬಾಳೆ ಎಲೆಗಳ ಮೇಲೆ ಹೊಸದಾಗಿದ್ದ ಬಾದಾಮಿ
ಕಾರದ ಎರಡು ಬೆಳ್ಳಿಯ ತಟ್ಟೆಗಳು ದೀಪದ ಬೆಳಕಿಗೆ ಕಣ್ಣು ಕೋರೈಸು
ಹೊಳೆಯುತ್ತಿದ್ದವು. ಮುಂದಿನ ಸಿಹಿ ತಿಂಡಿಗಳ ಸಮೂಹವನ್ನು
ಾಗಲೇ ಗೋಪಿಗೆ ಹೊಟ್ಟೆ ತುಂಬಿದಂತಾಯಿತು. ಸಿಹಿ ತಿಂಡಿಗಳೆಂದರೆ
ಬಿಡುತ್ತಿದ್ದ ನಳಿನಿ ಮೊದಲು ತಟ್ಟೆಗೆ ಕೈ ಹಾಕಿದಳು.

"ಹುಷಾರ್....ತಿನ್ನುವ ಆತುರದಲ್ಲಿ ನನ್ನ ತಟ್ಟೆಗೂ ಕೈ ಹಾಕೀಯೆ !"

ಗೋಪಿ ಪಕ್ಕದಲ್ಲಿ ತಲೆತಗ್ಗಿಸಿ ಕುಳಿತಿದ್ದರೂ, ಆತುರದಿಂದ ತಟ್ಟೆಯಲ್ಲಿರುವು
ನ್ನು ಹೊಟ್ಟೆಗೆ ಸೇರಿಸುತ್ತಿದ್ದ ಹೆಂಡತಿಯನ್ನು ಎಚ್ಚರಿಸಿದ.

ಅವನ ಮಾತು ಕೇಳಿ ಜಗಳವಾಡಲು ಬಾಯಿ ಬಿಚ್ಚಲು ಅಪೇಕ್ಷೆಯಾಯಿತು
ನಿಗೆ. ಆದರೆ ಬಾಯೊಳಗಿತ್ತು ಲಡ್ಡುವಿನ ಅರ್ಧ ತುಂಡು. ಸಿಟ್ಟನ್ನು ಆ ಲಡ್ಡು
ಂದಿಗೇ ನಳಿನಿ ನುಂಗಿ ಮೌನದ ಮರೆಹೊಕ್ಕಳು.

ಗೋಪಿ ತಟ್ಟೆಯಲ್ಲಿ ಸ್ವಲ್ಪ ಕಾಲ ಬೆರಳಾಡಿಸಿದ. ಬಡಿಸಿದ್ದುದೆಲ್ಲವನ್ನೂ
ಯ ಮೂಲೆಗಳಿಗೆ ತಳ್ಳಿದ. ಆದರೂ ನಳಿನಿಯ ಊಟ ಮುಗಿದಂತೆ ಅವನಿಗೆ
ಸಲಿಲ್ಲ. ತನ್ನ ಎಲೆಯ ಮೇಲಿದ್ದ ಲಾಡು ಉಂಡೆಯನ್ನು ಯಾರಿಗೂ
ತ್ತಾಗದಂತೆ ಮಡದಿಯ ಎದೆಯ ಮೇಲೆ ಉರುಳಿಸಿದ. ಬೇರೆಲ್ಲೋ
ೀಡುತ್ತಿದ್ದ ನಳಿನಿಗೂ ಅದು ತಿಳಿಯಲಿಲ್ಲ. ನಳಿನಿ ಆ ಲಾಡುವನ್ನು ಕೈಗೆತ್ತಿ
ಂಡಳು.

"ಅಕ್ಕಾ, ನಳಿನಿ ನನ್ನ ತಟ್ಟೆಯಲ್ಲಿದ್ದ ಲಾಡೂನೂ ತೆಗೆದುಕೊಂಡು
ಳು...."

ಗೋಪಿ ಸಮೀಪದಲ್ಲಿ ಕುಳಿತಿದ್ದ ಅಕ್ಕನಿಗೆ ಹೆಂಡತಿಯ ವಿಷಯದಲ್ಲಿ
ರುಕೊಟ್ಟ.

"ಮೇಡಂ....ಈ ಹುಡುಗ ನನ್ನ ಬಳಪ ಕದ್ದುಬಿಟ್ಟಿದ್ದಾನೆ...."

ಎಂದು ಚಾಡಿ ಹೇಳುವ ಐದುವರ್ಷದ ಹುಡುಗನ ಧಾಟಿಯಿತ್ತು ಗೋಪಿ
ಟ್ಟ ಆ ದೂರಿನಲ್ಲಿ. ಆಗ ಇದು ಗೋಪಿಯ ಕೆಲಸವೆಂದು ನಳಿನಿಗೆ ತಿಳಿದು
ಯಿತು. ಅರ್ಧ ತಿಂದು ಮುಗಿಸಿದ್ದ ಲಾಡುವನ್ನು ನಳಿನಿ ಮತ್ತೆ ಗೋಪಿಯ
ಗೆ ಹಾಕಿದಳು.

"ನಾವು ಕೇಳುವುದಕ್ಕಿಂತ ಮುಂಚೆ ಎಂಜಲು ತಿನ್ನಬೇಕೂ ಅನ್ನಿಸ್ತೇನೊ

ಇಬ್ಬರಿಗೂ...." ಮಾಧವರಾಯನ ತಂಗಿ ಚಂಚಲ ಇಬ್ಬರನ್ನೂ ಹಾಸ್ಯಮಾ ದಳು.

"ಎಂಜಲೋ ಏನೊ ? ಅಂತೂ ನನ್ನ ಲಾಡು ನನಗೆ ಬಂತಲ್ಲ ಸಧ್ಯ ! ಎಂದು ಹೇಳುತ್ತಾ ಹೆಂಡತಿ ಕೊಟ್ಟ ಅರ್ಧ ಲಾಡುವನ್ನು ಬಾಯೊಳಗಿಟ್ಟು ಚಪ್ಪರಿಸಿದ ಗೋಪಿ. ಲಾಡು ಎಂದರೆ ಸಿಡಿದುಬೀಳುತ್ತಿದ್ದ ಗೋಪಿಗೆ ಹೆಂಡತಿಯ ಎಂಜಲು ಲಾಡು ತುಂಬಾ ರುಚಿಕರವಾಗಿದ್ದಂತೆ ತೋರಿತು.

ಕೆಲಸವಾಗಿ ಎರಡು ವರ್ಷಗಳಾಗಿದ್ದುದರಿಂದ ಗೋಪಿ ಮದುವೆಯಾ ಕೂಡಲೆ ಹೆಂಡತಿಯನ್ನು ಜೊತೆಯಲ್ಲಿ ಕರೆದುಕೊಂಡು ಹೋದ. ಒಬ್ಬಳನ್ನೆ ಅಲ್ಲ....ಇಬ್ಬರನ್ನು ಅವನು ಊಟಿಗೆ ಕರೆದುಕೊಂಡು ಹೋಗಬೇಕಾಯಿತು.

ಒಬ್ಬಳು ?....ನಳಿನಿ, ಅಗ್ನಿಸಾಕ್ಷಿಯಾಗಿ ಕೈ ಹಿಡಿದ ಹೆಂಡತಿ.

ಮತ್ತೊಬ್ಬಳು ? ಸಾವಿತ್ರಮ್ಮ, ಇಬ್ಬರಿಗೂ ಮಾಡಿಹಾಕುವ ಅಡಿ ಯಾಕೆ !

* * * *

ನಳಿನಿ ಗಂಡನೊಡನೆ ಊಟಿಗೆ ಪ್ರಯಾಣ ಬೆಳಿಸಿದ ಮೇಲೆ ಮನೆಯವ ರೆಲ್ಲರೂ ಕೆಲವು ದಿವಸಗಳು ಪೆಚ್ಚುಮುಖ ಹಾಕಿಕೊಂಡಿದ್ದರು. ನಳಿನಿ ಹೊರಟು ಹೋದ ಮೇಲೆ ರಮೇಶನಿಗೆ ಯಾರೊಡನೆ ಜಗಳಕಾಯಬೇಕು ತಾನು ? ಎಂಬ ಸಮಸ್ಯೆ ತಲೆತೋರಿತು. ನಳಿನಿ ಮತ್ತು ರಮೇಶ ಇಬ್ಬರ ವಯಸ್ಸಿಗೂ ಬಹಳ ಅಂತರವಿತ್ತು. ಆದರೂ ಇಬ್ಬರೂ ಸಣ್ಣ ಪುಟ್ಟ ಕಾರಣಕ್ಕಾಗಿ ಕಚ್ಚಾಡದಿದ್ದರೆ ಆ ದಿನವೆಲ್ಲಾ ಅವರಿಗೆ ಉಂಡ ಊಟ ಮೈಗೆ ಹತ್ತುತ್ತಿರಲಿಲ್ಲ. ಹಿರಿಯಳಂತೆ, ತುಂಬು ಗಾಂಭೀರ್ಯದಿಂದ ಯಾರ ತಂಟೆಗೂ ಹೋಗದೆ ಇದ್ದ ಗಂಗಳನ್ನು ಕೈ ಬೀಸಿ ರಮೇಶ ಜಗಳಕ್ಕೆ ಕರೆದರೂ ಅವಳು ಬರುತ್ತಿರಲಿಲ್ಲ. ವಿದ್ಯಾಭ್ಯಾಸದಲ್ಲಿ ಆಸಕ್ತಿಯಿದ್ದ ಗಂಗೆಗೆ ಬೇರೆ ಯಾವ ವಿಷಯದಲ್ಲೂ ಶ್ರದ್ಧೆ ಇರಲಿಲ್ಲ. ಅಕ್ಕನಂತೆ ಕನ್ನಡಿಯ ಮುಂದೆ ನಿಂತುಕೊಂಡು ಎದುರಿಗಿರುವ ಕನ್ನಡಿಗೇ ಬೇಸರವಾಗುವಷ್ಟು ಕಾಲ ಅವಳು ಅಲಂಕರಿಸಿಕೊಳ್ಳುತ್ತಿರಲಿಲ್ಲ. ಬೆಲೆ ಬಾಳುವ ಒಡವೆಗಳನ್ನು ಹಾಕಿ, ಜರತಾರಿಯ ಬಟ್ಟೆಗಳನ್ನು ಹಾಕಿ ಮೆರೆಯುವ ಆಸೆಯಿಂದ ಅವಳು ಬಹು ದೂರವಾಗಿದ್ದಳು.

ಗಂಗಳ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯಿತು. ವೈದ್ಯಳಾಗಲು ಅವಳಿಗೆ ಮೆಡಿಕಲ್ ಕಾಲೇಜಿನಲ್ಲಿ ಸ್ಥಳಾವಕಾಶ ಸಿಕ್ಕಿತು. ಮಗಳಿಗೆ ಸೀಟು ದೊರೆತಿರುವ ವಿಷಯವನ್ನು ಕೇಳಿ ಕುಮುದ ಸಂತೋಷಪಟ್ಟಳು. ಆದರೂ ಅವಳ ಸಂಭ್ರಮದ

ವೆ ಸಂಶಯ ತಲೆದೋರದೆ ಇರಲಿಲ್ಲ. ಕುಮುದ ಗಂಡನ ಮುಂದೆ ತನ್ನ ಯವನ್ನಿಟ್ಟಳು.

"ಐದು ವರ್ಷದ ಈ ಕಠಿಣವಾದ ವ್ಯಾಸಂಗವನ್ನು ನಿಜವಾಗಿ ಗಂಗ ಸುವಳೆ ?" ಹೆಂಡತಿಯ ಮಾತು ಕೇಳಿ ಮಾಧವ ಜೋರಾಗಿ ನಕ್ಕುಬಿಟ್ಟ.

"ಸಂಸ್ಥಾನಕ್ಕೆಲ್ಲಾ ಎರಡನೆಯವಳಾಗಿ ಗಂಗ ಪ್ರಿ-ಯೂನಿವರ್ಸಿಟಿ ಪರೀಕ್ಷೆ ಉತ್ತೀರ್ಣಹೊಂದಿದ್ದಾಳೆ. ಅವಳ ವಿಷಯದಲ್ಲಿ ನಿನಗಿನ್ನೂ ಅನು ನವೆ ? ಎಷ್ಟು ಜನ ಹೆಣ್ಣುಮಕ್ಕಳು ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿಲ್ಲ, ಜನ ಹೆಂಗಸರು ವೈದ್ಯರಾಗಿ ಸೇವೆ ಸಲ್ಲಿಸುತ್ತಿಲ್ಲ....?"

"ಆದರೆ ಗಂಗ ಎಲ್ಲ ಹುಡುಗಿಯರಂತಲ್ಲ...."

ತಗ್ಗಿದ ಧ್ವನಿಯಲ್ಲಿ ಉತ್ತರ ಕೊಟ್ಟಳು ಕುಮುದ.

"ಆ ರೀತಿ ಮಾತ್ರ ಹೇಳಬೇಡ ಕುಮುದ. ಎಲ್ಲರಿಗಿಂತ ಗಂಗ ಒಂದು ಕ ಹೆಚ್ಚು ಎಂದೇ ನಾನು ತಿಳಿದಿದ್ದೇನೆ. ಸ್ವಲ್ಪ ಕುಂಟುವ ಅವಳ ಕಾಲಿನಿಂದ ಳ ಬುದ್ಧಿ, ಓದಿನಲ್ಲಿರುವ ಆಸಕ್ತಿ, ತಾಳ್ಮೆ, ನಡವಳಿಕೆ ಇವುಗಳನ್ನು ನಾವು ಷ್ಟಿಮಾಡುವುದೆ ?"

"ನಿಮ್ಮ ಮಾತು ನಿಜ. ಆದರೆ ಅವಳಿಗೆ ಈ ವ್ಯಾಸಂಗದಿಂದ ತೊಂದರೆ ಗಬಹುದೇನೊ ಅಂತ...."

"ತೊಂದರೆ ! ವಿದ್ಯಾಭ್ಯಾಸದಿಂದ ಯಾರಿಗಾದರೂ ತೊಂದರೆಯಾಗುವುದೆ? ಯವಂತಳಾದ ನಿನ್ನ ಬಾಯಿಂದ ಇಂತಹ ಮಾತುಗಳು ಬರುವುದೆಂದು ನಾನು ನಲ್ಲೂ ನಿರೀಕ್ಷೆಮಾಡಿರಲಿಲ್ಲ...."

"ಹೆಚ್ಚಿನ ಸುತ್ತಾಟದಿಂದ ಅವಳ ಕಾಲಿಗೆ ಹಿಂಸೆಯಾಗಬಹುದಲ್ಲವೆ ?"

"ಅದಕ್ಕಾಗಿ ನಾನೊಂದು ಕೆಲಸ ಮಾಡಿದ್ದೇನೆ. ಮೆಡಿಕಲ್ ಕಾಲೇಜಿ ಆಸ್ಪತ್ರೆಗೆ, ಆಸ್ಪತ್ರೆಯಿಂದ ಮನೆಗೆ, ಮೆಡಿಕಲ್ ವಿದ್ಯಾರ್ಥಿಗಳು ದಿನದ ಭಾಗವೆಲ್ಲಾ ಸುತ್ತಾಡುತ್ತಿರಬೇಕು. ಗಂಗಳಿಗೆ ಒಂದು ಸೈಕಲ್ ತೆಗೆಸಿ ಟ್ಟರೆ...."

"ಗಂಗಳಿಂದ ಸೈಕಲ್ ಬಿಡುವುದು ಸಾಧ್ಯವೆ ?"

ತನ್ನ ಗಾಬರಿಯಾದ ಮಾತುಗಳಿಂದ ಗಂಡನ ಪೂರ್ಣವಾಗದ ಮಾತನ್ನು ುದ ಕತ್ತರಿಸಿಹಾಕಿದಳು.

"ಗಂಗಳಿಂದ ಸುಲಭವಾಗಿ ಬಿಡಬಹುದಾದ ಸೈಕಲ್ ಒಂದನ್ನು ತಯಾರಿ ಕಂಪನಿಗೆ ಕಾಗದ ಬರೆದಿದ್ದೇನೆ. ತುಳಿಯುವ ಪೆಡಲುಗಳನ್ನು ಗಂಗೆಯು

ಚಿಕ್ಕದಾಗಿರುವ ಒಂದು ಕಾಲಿಗೆ ಸರಿಯಾಗಿ ಎಟಕುವಂತಿದ್ದರೆ ಅವಳಿಗೆ ಸುಲ ವಾಗುವುದು. ನಾನು ಕಂಪನಿಗೆ ಬರೆದು ಒಂದು ತಿಂಗಳ ಮೇಲಾಯಿತು. ಅವಳ ಕಾಲೇಜು ಬಾಗಿಲು ತೆಗೆಯುವಷ್ಟರಲ್ಲಿ ಸೈಕಲ್ ಬರಬಹುದು...."

"ಹೌದಣ್ಣ, ಆ ತರಹದ ಸೈಕಲನ್ನು ನಾನು ನೋಡಿದ್ದೇನೆ. ನಮ ಸ್ಕೂಲಿಗೆ ಒಬ್ಬ ಹುಡುಗ ವಿಚಿತ್ರ ರೀತಿಯ ಸೈಕಲ್ ಮೇಲೆ ಬರ್‍ತಾನೆ. ಆ ಸೈಕಲ ದೂರದಿಂದ ಎಲ್ಲ ಸೈಕಲ್ಲುಗಳಂತೆ ಕಂಡರೂ, ಹತ್ತಿರದಲ್ಲಿ ನೋಡಿದರೆ ಬಹ ವ್ಯತ್ಯಾಸಗಳಿರುವುದು ಕಾಣಿಸುವುದು...."

ರಮೇಶ ತಂದೆತಾಯಿಗಳ ಸಂಭಾಷಣೆಯ ನಡುವೆ ನುಸುಳಿ ಬಂದ.

ಪೋಸ್ಟ್‌ಮ್ಯಾನ್ ಎಸೆದ ಕಾಗದವೊಂದು ಒರಾಂಡದಲ್ಲಿ ಕಿಟಕಿಯ ಮೂಲಕ ತೂರಿ ಬಂದು ಬಿತ್ತು. ಬಿದ್ದ ಶಬ್ದಕ್ಕೆ ಮೂವರೂ ತಲೆ ಎತ್ತಿ ನೋ ದರು. ಸಮೀಪದಲ್ಲಿ ಕುಳಿತಿದ್ದ ಗಂಗೆ ಆ ಕಾಗದವನ್ನು ಕೈಗೆತ್ತಿಕೊಂಡಳು.

"ಯಾರ ಕಾಗದ ಗಂಗ ?"

"ಯಾರದ್ದೋ ಮದುವೆಯ ಆಹ್ವಾನ ಪತ್ರಿಕೆ...." ಆ ಲಗ್ನಪತ್ರಿಕೆಯನ್ನ ಗಂಗ ತಾಯಿಯ ಕೈಲಿರಿಸಿದಳು.

"ಓ ಮಾಲಿನಿಗೆ ಮದುವೆ !"

"ಯಾರು....ಪದ್ಮಾವತಮ್ಮನವರ ಮಗಳು ಮಾಲಿನಿಯೆ ?"

ಗಂಗ ವಿಸ್ಮಯದಿಂದ ಕೇಳಿ ಲಗ್ನಪತ್ರಿಕೆಯ ಮೇಲೆ ಕಣ್ಣೋಡಿಸಿದಳು.

"ಹೌದು...."

"ವಯಸ್ಸಿನಲ್ಲಿ ನನಗಿಂತ ಅವಳು ಎರಡು ವರ್ಷ ಚಿಕ್ಕವಳು. ಆಗಲೆ ಅವಳಿಗೆ ಮದುವೆ !" ಗಂಗ ಆಶ್ಚರ್ಯಪಟ್ಟರೂ, ಅವಳ ಹೃದಯದಲ್ಲಿ ಅಸೂಯೆಯ ಗುಳ್ಳೆಯೊಂದು ಕಾಣಿಸಿಕೊಂಡಿತು.

ಪ್ರಾಯದ ಹೊಸ್ತಿಲ ಮೇಲೆ ನಿಂತು ಕಳಕಳಿಸುತ್ತಿದ್ದ ಗಂಗೆಗೂ ಎಲ್ಲರಂ ಮದುವೆಯಾಗಿ, ಗೃಹಿಣಿಯಂತೆ ಬಾಳ್ವೆ ನಡೆಸುವ ಇಚ್ಛೆಯಿತ್ತು. ವಿದ್ಯಾಭ್ಯಾ ವನ್ನೇ ತನ್ನ ಮುಖ್ಯವಾದ ಗುರಿಯೆಂದು ಭಾವಿಸಿದ್ದರೂ, ಅವಳ ಯೌವ್ವನ ಜೀವನದ ಸಂಗಡಿಗನನ್ನು ಬಯಸುತ್ತಿತ್ತು.

ಅಲಂಕರಿಸಿಕೊಂಡು ಓಡಾಡುವ ದಂಪತಿಗಳನ್ನು ಕಂಡಾಗಲೆಲ್ಲಾ ಗಂ ಮೈಮರೆಯುತ್ತಿದ್ದಳು. ಹಗಲುಗನಸು ಕಾಣುತ್ತಾ ನಿಂತುಬಿಡುತ್ತಿದ್ದಳು ಪ್ರಾಯಕ್ಕೆ ಬಂದಿರುವ ಮಗಳಿಗೆ ಮದುವೆಮಾಡಲು ಸಾಧ್ಯವಿಲ್ಲವಲ್ಲಾ ಎಂದ ಕುಮುದ ಯೋಚಿಸಿ ಕೊರಗುತ್ತಿದ್ದಳು. ಮೋಹದ ಮಡದಿಯೆನಿಸಿಕೊಳ್ಳುವು

ಕ್ಕಿಂತ, ಮುದ್ದುಮಕ್ಕಳ ಮಮತೆಯ ತಾಯಿ ತಾನಾಗಬೇಕೆಂದು ಗಂಗಳಿಗೆ ಅವಳ ತಾಯ್ತನ ಕೂಗಿ ಹೇಳುತ್ತಿತ್ತು. ಎರಡು ಕರೆಗಳಿಗೂ ಕಿವಿಗೊಡದೆ ವಿದ್ಯಾಭ್ಯಾಸದಲ್ಲೇ ದೃಷ್ಟಿಯಿಟ್ಟು ಗಂಗ ಮುಂದೆ ಸಾಗುತ್ತಿದ್ದಳು.

ನವರಾತ್ರಿ ಸಂದರ್ಭದಲ್ಲಿ ಗಂಗ ಸ್ನೇಹಿತರೊಡನೆ ಮೈಸೂರಿಗೆ ಹೋದಳು. ಅವಳ ಸ್ನೇಹಿತೆ ಕಲ್ಪನಳ ಮನೆಯಲ್ಲೇ ಗಂಗ ಇಳಿದುಕೊಂಡಿದ್ದಳು. ಒಂದು ವಾರ ಕನ್ನಂಬಾಡಿಕಟ್ಟೆ, ಚಾಮುಂಡಿಬೆಟ್ಟ, ಶ್ರೀರಂಗಪಟ್ಟಣ, ಜಂಬೂಸವಾರಿ, ವಸ್ತುಪ್ರದರ್ಶನ, ಇವುಗಳನ್ನೆಲ್ಲಾ ನೋಡುವ ಸಂಭ್ರಮದಲ್ಲಿ ಎಲ್ಲರೂ ಮೈಮರೆತರು. ಮೈಸೂರಿನಿಂದ ಹಿಂತಿರುಗಿ ಬಂದ ಮಗಳನ್ನು ಕುಮುದ ಪ್ರಶ್ನಿಸಿದಳು.

"ಅಮ್ಮಾ....ಕಲ್ಪನಳ ಅಣ್ಣನ ಮಗು ಎಷ್ಟು ಚೆನ್ನಾಗಿದೆ ಅಂತ ? ಆ ಮಗುವಿನ ಹೆಸರು ದಿನಕರ. ದಿನಕರನಷ್ಟೇ ಅವನೂ ತೇಜಸ್ವಿಯಾಗಿದ್ದಾನೆ. ಅವನ ಮಾತೋ ? ಅವನು ಆಡುವ ಆಟಗಳೋ....ಮಾಡುವ ಚೇಷ್ಟೆಯೋ....?"

ಗಂಗ ಆ ಮಗುವಿನ ವರ್ಣನೆಗೆ ಪ್ರಾರಂಭಿಸಿದಳು. ಅನೇಕ ಸ್ಥಳಗಳಿಗೆ ಹೋಗಿ, ಹತ್ತಾರು ಕಣ್ಸೆರೆ ಹಿಡಿಯುವ ನೋಟಗಳನ್ನು ನೋಡಿ ಬಂದಿದ್ದರೂ ಗಂಗ ಅವುಗಳನ್ನೆಲ್ಲಾ ತಾಯಿಗೆ ಹೇಳದೆ ಮುದ್ದಾದ ಮಗುವಿನ ವರ್ಣನೆಯನ್ನು ಬಣ್ಣಿಸಿದ್ದಳು.

ಬಾಲ್ಯದಲ್ಲಿ ಬೊಂಬೆ ಹಿಡಿದು ಆಡುತ್ತಿದ್ದರೆ ಗಂಗಳಿಗೆ ಊಟ, ತಿಂಡಿಗಳ ಮೇಲೆ ಗಮನವೇ ಇರುತ್ತಿರಲಿಲ್ಲ. ಅವಳು ಬೆಳೆದಹಾಗೆಲ್ಲಾ....ಅವಳಿಗೆ ಮಕ್ಕಳ ಮೇಲೆ ಪ್ರೀತಿ ಬೆಳೆದು ಬಂತು. ಬೀದಿಯಲ್ಲಿ ಓಡಾಡುವ ಮಕ್ಕಳನ್ನೆಲ್ಲಾ ಹತ್ತಿರಕ್ಕೆ ಕರೆದು ಮುದ್ದಾಡುವ ಮಗಳನ್ನು ನೋಡಿದಾಗಲೆಲ್ಲಾ ಕುಮುದಳ ಹೃದಯ ಭಾರವಾಗುತ್ತಿತ್ತು. ಮಗುವಿನ ತಾಯಿಯಾಗಲು ಗಂಗಳಿಗೆ ಈ ಜನ್ಮದಲ್ಲಿ ಅವಕಾಶವಿದೆಯೆ ? ಎಂದು ತನ್ನನ್ನು ತಾನೇ ಕೇಳಿಕೊಳ್ಳುತ್ತಿದ್ದಳು.

"ನೀನು ಎಲ್ಲೆಲ್ಲಿ ಹೋಗಿದ್ದೆ ಗಂಗ? ವಸ್ತುಪ್ರದರ್ಶನದಲ್ಲಿ ನೋಡಲೇ ಬೇಕಾದಂತಹ ವಸ್ತು ಯಾವುದು ?"

"ನನ್ನ ಸ್ನೇಹಿತೆಯರೆಲ್ಲಾ ನಾಲ್ಕೈದು ಬಾರಿ ವಸ್ತುಪ್ರದರ್ಶನಕ್ಕೆ ಹೋಗಿದ್ದರು. ಆದರೆ ನಾನು ಮಾತ್ರ ದಿನಕರನನ್ನು ಆಟವಾಡಿಸುತ್ತಾ ಮನೆಯಲ್ಲೇ ಕುಳಿತುಬಿಡುತ್ತಿದ್ದೆ. ಅಂತಹದೊಂದು ಮಗು ನನ್ನ ಬಳಿ ಇದ್ದರೆ ಪ್ರಪಂಚವೇ ನನಗೆ ಬೇಡ...."

'ಅಯ್ಯೋ ದೇವರೆ !' ಕುಮುದ ಮನಸ್ಸಿನಲ್ಲೇ ನರಳಿದಳು.

ತಂದೆ ತರಿಸಿಕೊಟ್ಟ ಸೈಕಲ್ಲನ್ನು ನೋಡಿದಾಗ ಗಂಗೆಯ ಹಿಗ್ಗು ಹೇಳ

ತೀರದು ! ತಂದೆ ಹಾಗೂ ತಮ್ಮನ ನೆರವಿನಿಂದ ಸೈಕಲ್ ಬಿಡುವುದನ್ನು ಒಂದು ವಾರದೊಳಗಾಗಿ ಗಂಗ ಕಲಿತುಕೊಂಡಳು. ಮೊದಲನೆಯ ದಿನ ಗಂಗ ಸೈಕಲ್ ಮೇಲೆ ಕುಳಿತು ಕಾಲೇಜಿಗೆ ಹೋಗಿ ಮನೆಗೆ ಬರುವವರೆವಿಗೂ ಹೆದರಿಕೆಯಿಂದ ಕುಮುದಳ ಎದೆ ಹೊಡೆದುಕೊಳ್ಳುತ್ತಿತ್ತು.

"ಗಂಗ....ಸೈಕಲ್ ಸವಾರಿ ಮಾಡುವುದರಿಂದ ನಿನಗೆ ಏನೂ ತೊಂದರೆ ಯಾಗುವುದಿಲ್ಲ ತಾನೆ ? ಕಾಲಿಗೆ ನೋವಾಗುವುದಿಲ್ಲವೆ ?"

"ನಾನೇನು ಇನ್ನೂ ಮಗುವೇನಮ್ಮಾ ?"

ತಾಯಿ ದುಗುಡದಿಂದಾಡಿದ ಮಾತಿಗೆ ನಗೆಯ ಉತ್ತರವೊಂದನ್ನು ಗಂಗ ಚಿಮ್ಮಿಸಿದಳು.

ವಿದ್ಯಾಭ್ಯಾಸವನ್ನು ಮುಂದುವರಿಸಲು ಗಂಗ ಮಂಡ್ಯವನ್ನು ಬಿಟ್ಟು ಮೈಸೂರಿಗೆ ಪ್ರಯಾಣ ಬೆಳಸಿದಳು. ಹಾಸ್ಟಲ್ಲಿನಲ್ಲಿದ್ದುಕೊಂಡು ಓದುವುದೆಂದು ತಂದೆಯ ನಿರ್ಧಾರಕ್ಕೆ ಗಂಗ ಸಮ್ಮತಿಸಿದಳು. ಆದರೆ ತನ್ನ ತಾಯಿಯ ಮನೆ ಯಲ್ಲೇ ಮಗಳು ಇರಲಿ ಎಂಬ ಆಸೆ ಕುಮುದಳಿಗೆ.

"ಗಂಗ ನಮ್ಮಮ್ಮನ ಮನೆಯಲ್ಲಿರಲಿ, ಅಜ್ಜಿ ಮನೆ ಇದ್ದೂ ಅವಳು ಹಾಸ್ಟಲ್ಲಿನಲ್ಲಿರಬೇಕೇನು ?"

ಗಂಡನ ಸಲಹೆಯನ್ನು ತೆಗೆದುಹಾಕಲು ಕುಮುದ ಪ್ರಯತ್ನಿಸಿದಳು.

"ಗಂಗಳ ವಿದ್ಯಾಭ್ಯಾಸ ನಿರಾತಂಕವಾಗಿ ಮುಂದುವರೆಯಬೇಕಾದರೆ ಅವಳು ಯಾರ ಮನೆಯಲ್ಲಿರುವುದೂ ಬೇಡ. ಸಹಪಾಠಿಗಳ ಸಹವಾಸದಲ್ಲಿದ್ದರೆ ಅವಳಿಗೆ ಹೆಚ್ಚು ಅನುಕೂಲ. ನಿನ್ನ ತಮ್ಮನ ಮನೆಯಲ್ಲಿ ಸಿಕ್ಕಿದ ಆತಿಥ್ಯವನ್ನು ನೀನಿನ್ನೂ ಮರೆತಿಲ್ಲ ತಾನೆ ? ಸಂಬಂಧಿಕರಿಗಿಂತ ಸ್ನೇಹಿತರ ಸಹವಾಸವೇ ಮೇಲು. ಹಾಸ್ಟಲ್ಲಿನ ಜೀವನದ ಸವಿರುಚಿಯನ್ನ ಗಂಗ ಸವಿಯಲಿ...."

ಮಾಧವ ಬಟ್ಟಲೊಳಗಿದ್ದ ಕೊನೆಯ ಗುಟುಕು ಕಾಫಿಯನ್ನು ಬಾಯೊಳಗೆ ಬಗ್ಗಿಸಿಕೊಂಡ. ಕುಮುದ ಬಾಯಿಮುಚ್ಚಿಕೊಳ್ಳಲೇಬೇಕಾಯಿತು.

ಕುಮುದ ಊರಿಗೆ ಹೊರಡುವ ಮಗಳಿಗೆ ನಾಲ್ಕಾರು ಬಗೆಯ ಸಿಹಿತಿಂಡಿ ಗಳನ್ನು ಮಾಡಿಕೊಟ್ಟಳು. ಮೊದಲ ಬಾರಿ, ಹುಟ್ಟಿದ ಹದಿನೆಂಟು ಸಂವತ್ಸರಗಳ ನಂತರ ಗಂಗ ತಂದೆತಾಯಿಗಳಿಂದ ಅಗಲಬೇಕಾಯಿತು.

ಮಾಧವ ಮಗಳೊಡನೆ ಮೈಸೂರಿಗೆ ಪ್ರಯಾಣ ಬೆಳಸಿದ. ಗಾಡಿಯಲ್ಲಿ ಕುಳಿತಿದ್ದ ಮಗಳನ್ನು ನೋಡಿ ಕುಮುದ ಅಗಲಿಕೆಯ ವೇದನೆಯಿಂದ ಕಣ್ಣೀರು

ಹಾಕಿದಳು. ನಳಿನಿಯನ್ನು ಗಂಡನ ಮನೆಗೆ ಕಳುಹಿಸಿಕೊಡುವಾಗ ಸಹ ಅವಳ ಕಣ್ಣು ತೇವವಾಗಿರಲಿಲ್ಲ.

"ವಿದ್ಯಾಭ್ಯಾಸವನ್ನು ಮುಂದುವರಿಸಲು ಪ್ರಯಾಣ ಬೆಳಸುತ್ತಿರುವ ಮಗಳಿಗೆ ನೀನು ಕಣ್ಣೀರುಹಾಕುತ್ತಾ ಬೀಳ್ಕೊಡುವುದೆ ? ಚೆನ್ನಾಯಿತು...."

ಮಾಧವ ಹೆಂಡತಿಯ ಹೆಣ್ಣು ಹೃದಯದಲ್ಲಿ ಧೈರ್ಯ ತುಂಬಿದ.

* * * *

ಮನೆಯ ಶಾಂತವಾದ ವಾತಾವರಣದಲ್ಲಿ ಹದಿನೆಂಟು ವರ್ಷಗಳ ಕಾಲ ಬೆಳೆದಿದ್ದ ಗಂಗೆಗೆ ಹಾಸ್ಟಲಿನ ವಾತಾವರಣಕ್ಕೆ ಹೊಂದಿಕೊಳ್ಳಲು ಸ್ವಲ್ಪ ಕಷ್ಟವಾಯಿತು.

ಇಬ್ಬರು ಹುಡುಗಿಯರೊಡನೆ ಗಂಗ ಒಂದು ಪುಟ್ಟ ಕೋಣೆಯೊಂದನ್ನು ಹಂಚಿಕೊಳ್ಳಬೇಕಾಯಿತು. ಒಬ್ಬಳ ಹೆಸರು ನಿರ್ಮಲ. ಮತ್ತೊಬ್ಬಳು ಮಾತಿನಮಲ್ಲಿ ಕಮಲ.

ಕೊನೆಯ ವರ್ಷದ ಎಂ. ಬಿ. ಬಿ. ಎಸ್. ತರಗತಿಯಲ್ಲಿ ಓದುತ್ತಿದ್ದ ನಿರ್ಮಲ ಪೂನಾ ಸಮೀಪದಲ್ಲಿದ್ದ ಹಳ್ಳಿಯಿಂದ ಮೈಸೂರಿಗೆ ಬಂದಿದ್ದಳು. ಆರೋಗ್ಯ ಸೂಸುವ ಆಕೆಯ ಗೋಧಿಯ ಮೈಬಣ್ಣ, ಎತ್ತರವಾದ ನಿಲುವು, ಹೆಚ್ಚು ಅಲಂಕಾರಗಳಿಲ್ಲದ ಆಕೆಯನ್ನು ನೋಡಿದಕೂಡಲೆ ಗಂಗೆಯ ಮನಸ್ಸಿಗೆ ಹಿಡಿಸಿತು. ನೋಡಿದಕೂಡಲೆ ಆಕೆ ಮರಾಠಿ ಹುಡುಗಿಯಿರಬಹುದೆಂದು ಗಂಗ ಊಹೆಮಾಡಿದಳು. ಅವಳೊಡನೆ ಮಾತುಕತೆ ನಡೆಸಿದ ಮೇಲೆ ಅವಳ ಊಹೆ ಸತ್ಯವಾಗಿತ್ತು.

ನಿರ್ಮಲ ಹೆಚ್ಚು ಮಾತು ಬೇಕಿಲ್ಲದ ಹುಡುಗಿ. ಮದುವೆಯಾಗಿ ಎರಡು ವರ್ಷಗಳಾಗಿದ್ದರೂ ಗಂಡನ ಅನುಮತಿಯನ್ನು ಪಡೆದು ಓದನ್ನು ಮುಂದುವರಿಸು ತ್ತಿದ್ದಳು. ನಿರ್ಮಲಳ ಗಂಡ ಕೈತುಂಬಾ ಸಂಪಾದಿಸುತ್ತಿದ್ದ. ದುಡಿದು ಸಂಪಾ ದಿಸುವ ಅಗತ್ಯ ನಿರ್ಮಲಳಿಗೆ ಅನಗತ್ಯವಾಗಿದ್ದರೂ ವೈದ್ಯಳಾಗಿ ಜನಸೇವೆಮಾಡ ಬೇಕೆಂಬಾಸೆ ಅವಳಿಗೆ.

ಕಾಲೇಜಿನಿಂದ ಹಾಸ್ಟಲಿಗೆ ಬಂದು ತಿಂಡಿಯನ್ನು ತಿಂದು, ಕಾಫಿಯನ್ನು ಕುಡಿದು ಓದಲು ನಿರ್ಮಲ ಪ್ರಾರಂಭಿಸುತ್ತಿದ್ದಳು. ಊಟದ ಗಂಟೆ ಬಾರಿಸುವ ವರೆಗೂ ಕುರ್ಚಿಯನ್ನು ಬಿಟ್ಟು ಅವಳು ಮೇಲೇಳುತ್ತಿರಲಿಲ್ಲ.

ಆದರೆ ಇನ್ನೊಬ್ಬಳು ? ಅವಳ ನಾಮಧೇಯ ಕಮಲ ಎಂದು ಗಂಗೆಗೆ ತಿಳಿಯಿತು.

ಅವಳ ಸ್ವಭಾವ ನಿರ್ಮಲಳ ಸ್ವಭಾವಕ್ಕೆ ತೀರ ವಿರುದ್ಧವಾಗಿತ್ತು. ಊಟ, ನಿದ್ರೆ ಇವುಗಳನ್ನು ಬಿಟ್ಟು ಮಿಕ್ಕ ಕಾಲದಲ್ಲೆಲ್ಲಾ ಅವಳ ಬಾಯಿ ತಡೆಯಿಲ್ಲದೆ ಬಡಬಡಿಸುತ್ತಿತ್ತು. ಓದುತ್ತಿದ್ದ ನಿರ್ಮಲಳನ್ನೂ ಮಾತಿಗೆಳೆಯುತ್ತಿದ್ದಳು—ಆ ಮಾತಿನ ಮಲ್ಲಿ ಕಮಲ !

ಗಂಗ ಹಾಸ್ಟಲ್ಲಿಗೆ ಸೇರಿದ ದಿನ ಕಮಲ ಮುಂದೆ ಬಂದು ಅವಳಿಗೆ ತನ್ನ ಪರಿಚಯಮಾಡಿಕೊಟ್ಟಳು.

"ನನ್ನ ಹೆಸರು ಕಮಲ....ನಮ್ಮೂರು ಅರಸೀಕೆರೆ....ನಾನು ಸೆಕೆಂಡ್ ಎಂ. ಬಿ.ನಲ್ಲೇ ನಾಲ್ಕು ವರ್ಷದಿಂದ ಓದುತ್ತಿದ್ದೇನೆ....ನಿಮ್ಮ ಹೆಸರು ?"

"ನನ್ನ ಹೆಸರು ಗಂಗ."

ಗಂಗ ಓಡುವ ಕುದುರೆಗೆ ಕಡಿವಾಣ ಹಾಕಿ ನಿಲ್ಲಿಸುವಂತೆ ಕಮಲಳಿಗೆ ಸಾವಧಾನದಿಂದ ಚುಟುಕಾದ ಉತ್ತರವನ್ನು ಕೊಟ್ಟಳು.

"ನಿಮ್ಮ ಕಾಲು ಏನಾಗಿದೆ ? ಯಾಕೆ ಕುಂಟುತ್ತೀರಲ್ಲಾ ?"

ಕಮಲ ಪರಿಚಯದ ಪ್ರಾರಂಭದಲ್ಲೇ ಗಂಗಳ ಕಾಲಿನ ತನಿಖೆಗೆ ಪ್ರಾರಂಭಿಸಿದಳು.

"ಚಿಕ್ಕ ಮಗುವಾಗಿದ್ದಾಗ ನನಗೆ ಪೋಲಿಯೋ ಖಾಯಿಲೆಯಾಗಿತ್ತು...."

ಕಬ್ಬಿಣದ ಪೆಟ್ಟಿಗೆಯಿಂದ ಪುಸ್ತಕಗಳನ್ನು ತೆಗೆದು ಮೇಜಿನ ಮೇಲೆ ಗಂಗ ಜೋಡಿಸುತ್ತಾ ನಿರ್ವಿಕಾರಚಿತ್ತದಿಂದ ಹೇಳಿದಳು.

"ಆ ರೀತಿ ಹುಡುಗಿಯನ್ನು ನೀನು ಕೇಳೋದೆ ಕಮಲ ? ಪಾಪ ! ಹುಡುಗಿ ಮನಸ್ಸಿನಲ್ಲಿ ಎಷ್ಟು ನೊಂದುಕೊಂಡಳೋ ಏನೋ ? ಏನು ವಾಚಾಳೀನೆ ನೀನು."

ಗಂಗಳ ಮರೆಯಲ್ಲಿ ನಿರ್ಮಲ ಕಮಲಳನ್ನು ತರಾಟೆಗೆ ತೆಗೆದುಕೊಂಡಳು.

"ಹೌದಾ ? ನನ್ನ ಮಾತು ಆ ಹುಡುಗಿಯ ಮನಸ್ಸನ್ನು ನೋಯಿಸಿರಬಹುದೇನು ?"

ಕಮಲ ಮುಗ್ಧಳಂತೆ ಕಣ್ಣರಳಿಸಿ ಗಲ್ಲದ ಮೇಲೆ ಬೆರಳಿಟ್ಟು ಯೋಚಿಸಿದಳು.

ಮಾತು ಒರಟಾಗಿ ಆಡುತ್ತಿದ್ದರೂ ಕಮಲಳ ಮನಸ್ಸು ಹೂವಿನಂತೆ ಕೋಮಲ. ಮಾತಿನಲ್ಲೊಂದು, ಹೃದಯದಲ್ಲೊಂದು ಅವಳ ಜಾಯಮಾನಕ್ಕೇ ಬಂದಿರಲಿಲ್ಲ. 'ಇದ್ದದ್ದನ್ನು ಇದ್ದಹಾಗೆ ಹೇಳಿದರೆ ಎದ್ದು ಬಂದು ಎದೆಗೆ ಒದ್ದನಂತೆ,' ಎನ್ನುವ ಗಾದೆಗೆ ತಕ್ಕಂತೆ ಮುಚ್ಚುಮರೆಯಿಲ್ಲದೆ ಮಾತುಗಳನ್ನಾಡುತ್ತಿದ್ದ ಕಮಲ ಅನೇಕ ಹುಡುಗಿಯರ ನಿಷ್ಠುರಕ್ಕೆ ಒಳಗಾಗಿದ್ದಳು.

ನಿರ್ಮಲಳ ಬುದ್ಧಿ ಮಾತುಗಳನ್ನು ಕೇಳಿಯೂ ಅವಳ ಸ್ವಭಾವ ಬದಲಾಗಲಿಲ್ಲ.

ಗಂಗ ಮನೆಯಿಂದ ತಂದಿದ್ದ ಸಿಹಿ ತಿಂಡಿಗಳನ್ನು ತನ್ನ ರೂಂ ಮೇಟ್ ಇಬ್ಬರಿಗೂ ಕೊಟ್ಟಳು.

"ಇದೇನು ಗಂಗ ?"

ನಿರ್ಮಲ ಚಮಚದಿಂದ ಗಂಗ ಕೊಟ್ಟ ಸಿಹಿ ತಿಂಡಿಯನ್ನು ಬಾಯೊಳಗಿಟ್ಟು, ಅದರ ರುಚಿಯನ್ನು ಸವಿಯುತ್ತಾ ಕೇಳಿದಳು.

"ದಮರೋಟು...."

"ಏನು....ಸಾರೋಟಿ ? ನಾನು ಈ ಸಿಹಿ ತಿಂಡಿಯನ್ನು ತಿನ್ನುತ್ತಿರುವುದು ಇದೇ ಮೊದಲು. ಇದರ ಹೆಸರನ್ನು ಕೇಳಿಯೇ ಇರಲಿಲ್ಲ."

"ನಾನು ಈ ತಿಂಡಿಯನ್ನು ತಿಂದಿದ್ದೆ. ಆದರೆ ಹೆಸರು ಕೇಳಿರಲಿಲ್ಲ ಅಷ್ಟೆ !"

ಕಮಲಳ ಮಾತು ಕೇಳಿ ಗಂಗೆಯ ಗಂಭೀರ ಮುಖಮುದ್ರೆಯ ಬಿಗಿತವೂ ನಗೆಯಿಂದ ಬಿರಿಯಿತು.

"ಊಟಕ್ಕೆ ಗಂಟೆ ಹೊಡೆಯಬೇಕಾಗಿತ್ತಲ್ಲಾ....ಆ ಮುನಿಯಮ್ಮ ಮರೆತು ಗುರವನ್ನೊರಗಿ ತೂಕಡಿಸುತ್ತಾ ಇರಬೇಕು...."

ಕಮಲ ತಟ್ಟೆಯನ್ನು ಬರಿದುಮಾಡಿ ಮೇಜಿನ ಮೇಲಿಟ್ಟಳು. ತಿಂಡಿ ಹೊಟ್ಟೆ ಸೇರಿದ ಮೇಲೆ ಅವಳಿಗೆ ಊಟದ ಯೋಚನೆಯಾಯ್ತು.

ಅವಳ ಮಾತು ಮುಗಿದ ಕೂಡಲೆ ಊಟದ ಗಂಟೆ ಬಾರಿಸಿತು. ಎಲ್ಲರೂ ತಟ್ಟೆಗಳನ್ನು ತೆಗೆದುಕೊಂಡು ಮೇಲೆದ್ದರು.

"ನನ್ನ ಹತ್ತಿರ ತಟ್ಟೆ ಇಲ್ವಲ್ಲಾ....ಊಟಕ್ಕೆ ಎಲೆಗಳನ್ನು ಹಾಕುವುದಿಲ್ಲವೆ?" ಗಂಗಳ ಮಾತಿಗೆ ನಿರ್ಮಲ ತಲೆಯಾಡಿಸಿದಳು.

"ನನ್ನ ಹತ್ತಿರ ಇನ್ನೊಂದು ತಟ್ಟೆ ಇದೆ. ಇವತ್ತು ಆ ತಟ್ಟೆಯಲ್ಲಿ ಊಟ ಮಾಡಿ....ನಾಳೆ ಪೇಟೆಗೆ ಹೋಗಿ ಒಂದು ತಟ್ಟೆಯನ್ನು ಕೊಂಡುಕೊಂಡ ರಾಯಿತು."

ನಿರ್ಮಲ ಕರಿಮರದ ಬೀರುವನ್ನು ತೆಗೆದು ಗಾಜಿನ ತಟ್ಟೆಯನ್ನು ಗಂಗಳಿಗೆ ಕೊಟ್ಟಳು.

"ಥ್ಯಾಂಕ್ಸ್...."

ಕಮಲ ಶೀಷೆಯಿಂದ ಎರಡು ಹೋಳು ಉಪ್ಪಿನಕಾಯಿಯನ್ನು ತನ್ನ ತಟ್ಟೆಗೆ ಹಾಕಿಕೊಳ್ಳುತ್ತಾ ಗಂಗಳನ್ನು ಕೇಳಿದಳು.

"ನಿಮಗೂ ಉಪ್ಪಿನಕಾಯಿ ಬೇಕೇನು ?"

"ನಿಂಬೇಕಾಯಿ ಉಪ್ಪಿನಕಾಯಿ ಇದ್ದರೆ ಕೊಡಿ...."

ಗಂಗಳ ಮಾತಿಗೆ ಕಮಲ ರೂಮಿನ ಮೇಲ್ಛಾವಣಿಯು ಗಗನದತ್ತ ಹಾರಿ ಹೋಗುವಂತೆ ಅಟ್ಟಹಾಸದಿಂದ ನಕ್ಕಳು. ಅವಳ ನಗು ನಿಲ್ಲುವವರೆಗೂ ಗಂಗ ಆಶ್ಚರ್ಯದಿಂದ ಕಣ್ಣುಗಳನ್ನು ವಿಶಾಲವಾಗಿ ತೆರೆದು, ಕಡೆದ ವಿಗ್ರಹದಂತೆ ನಿಂತು ಕೊಂಡಿದ್ದಳು.

ಗಂಗಳ ಸ್ಥಿತಿಯನ್ನು ಕಂಡು ಕೊನೆಗೆ ಕಮಲಳಿಗೇ ಪಶ್ಚಾತ್ತಾಪವುಂಟಾ ಯಿತು.

"ನಾನು ಯಾತಕ್ಕಾಗಿ ನಕ್ಕೆ ಎನ್ನುವುದು ನಿಮಗೆ ತಿಳಿಯಿತೆ ?"

ಆ ಮಾತು ಕಮಲಳ ಬಾಯಿಂದ ಹೊರಬರುವಾಗ ಸಹ ಅವಳ ದೇಹವೆಲ್ಲಾ ನಗುವಿನಿಂದ ಕುಲುಕಾಡುತ್ತಿತ್ತು.

ಕಮಲಳ ಅಟ್ಟಹಾಸದ ನಗು....ನಿರ್ಮಲಳ ಮೆಲುನಗೆ....ಗಂಗಳ ಬೆಪ್ಪು ಬಡಿದ ವಿಸ್ಮಯ ಸೂಚಿಸುವ ಮುಖ....

ಮೂವರೂ ಒಂದೇ ಕೋಣೆಯಲ್ಲಿ ಒಂದೇ ಸನ್ನಿವೇಶಕ್ಕೆ ಸಂಬಂಧಿಸಿದ್ದರೂ, ಅವರೆಲ್ಲರೂ ಭಿನ್ನಭಿನ್ನವಾದ ಪ್ರತಿಕ್ರಿಯೆಯನ್ನು ತೋರಿಸಿದರು.

"ಕಮಲ...."

ಬಿರುಸಿನ ವೇಗದಿಂದ ಬಾಗಿಲ ಬಳಿ ನಿಂತು ಕೂಗಿದ ಹೆಣ್ಣು ಕಂಠವನ್ನು ಕೇಳಿ ಗಂಗ ಬೆಚ್ಚಿದಳು. ಕಮಲ ನಗೆಯನ್ನು ಮುಂದುವರೆಸುತ್ತಲೇ ಹೋಗಿ ಬಾಗಿಲು ತೆಗೆದಳು.

"ನಿಮ್ಮ ರೂಮಿನಲ್ಲಿ ತುಂಬಾ ಗಲಾಟೆಯಾಗುತ್ತಿದೆ. ನಾವು ಪರೀಕ್ಷೆಗೆ ಓದಿ ಕೊಳ್ಳಬೇಡವೇನು ?" ನಾಲ್ಕನೇ ವರ್ಷದ ಎಂ. ಬಿ. ಬಿ. ಎಸ್. ತರಗತಿಯಲ್ಲಿ ಓದುತ್ತಿದ್ದ ಮಹಮದೀಯ ಹುಡುಗಿಯೊಬ್ಬಳು ದಿಟ್ಟತನದಿಂದ, ಸಿಟ್ಟಿನಿಂದಾದ ಬಿಗಿದಮೋರೆಯಿಂದ ಕಮಲಳನ್ನು ಕೇಳಿದಳು.

"ಪರೀಕ್ಷೆಗೆ ನಾನಂತೂ ಓದುವುದಿಲ್ಲ. ಇತರರನ್ನು 'ಓದಬೇಡಿ' ಎಂದು ನಾನು ಇದುವರೆವಿಗೆ ಬಲಾತ್ಕಾರ ಮಾಡಿಲ್ಲವಲ್ಲಾ ?"

ಏನೂ ತಿಳಿಯದ, ಯಾವ ಪಾಪ ಕೆಲಸವನ್ನೂ ಮಾಡದವಳಂತೆ ಮುಗ್ಧ

ಳಾಗಿ ಕಣ್ಣರಳಿಸಿ ಹೇಳಿದ ಕಮಲಳನ್ನೇ ನೋಡುತ್ತಿದ್ದ ಗಂಗಳ ಮನಸ್ಸಿಗೆ ಜುಗುಪ್ಸೆಯಾಯಿತು.

ಆ ಮುಸ್ಲಿಂ ಹುಡುಗಿಯ ಹಾಲುಬಣ್ಣದ ತುಂಬಿದ ಮುಖಕ್ಕೆ ಕೇಸರಿ ಬೆರಸಿದಂತಿತ್ತು. ಮುದ್ದಾಗಿದ್ದ 'ಆ ದುಂಡು ಮುಖಕ್ಕೆ ಕೆಂಪು ಕುಂಕುಮದ ತಿಲಕ ವಿಟ್ಟರೆ?' ಗಂಗ ಆ ಹುಡುಗಿಯ ಬರಿದಾಗಿದ್ದ ದೊಡ್ಡ ಹಾಲು ಹಣೆಗೆ ಕೆಂಪು ತಿಲಕವನ್ನು ಇಟ್ಟು ಮನಸ್ಸಿನಲ್ಲೇ ಆ ಸುಂದರ ನೋಟವನ್ನು ಕಲ್ಪಿಸಿಕೊಂಡು ಹಿಗ್ಗಿದಳು.

"ಕುಂಕುಮವಿಟ್ಟರೆ ಈ ಹುಡುಗಿ ತುಂಬಾ ಮುದ್ದಾಗಿ ಕಾಣಿಸುತ್ತಾಳೆ...."

ನಿರ್ಮಲಳ ಕಿವಿಯಲ್ಲಿ ಗಂಗಾ ಪಿಸುಗುಟ್ಟಿದಳು.

"ನಾನು ಈಗಲೇ ವಾರ್ಡನ್‌ಗೆ ಹೇಳ್ತೀನಿ. ನಿಮ್ಮ ಗಲಾಟೆಯಿಂದ ನನಗೆ ಓದಿಕೊಳ್ಳೋದಿಕ್ಕೆ ಸಾಧ್ಯವಾಗ್ತಾ ಇಲ್ಲ...."

"ನೀವು ವಾರ್ಡನ್‌ಗೆ ಹೇಳ್ತೀನಿ ಅಂತ ಮನಸ್ಸು ಮಾಡಿದರೆ ಅದನ್ನು ತಪ್ಪಿ ಸೋದಕ್ಕೆ ನಿಮ್ಮ ಅಲ್ಲಾ, ಅಥವಾ ನಮ್ಮ ಈಶ್ವರ ಇಬ್ಬರಿಂದಲೂ ಸಾಧ್ಯವಿಲ್ಲ."

ಬಳಸು ಮಾತುಗಳಿಂದ ಕಮಲ ಆ ಹುಡುಗಿಯನ್ನು ಕೆರಳಿಸಿ ಕಳುಹಿಸಿದಳು. ಸರಸರನೆ ನಡೆದು ಹೋಗುತ್ತಿದ್ದ ಆ ಹುಡುಗಿಯನ್ನು ನೋಡುತ್ತಾ ನಿಂತಿದ್ದ ಗಂಗೆಗೆ ಏಟು ತಿಂದು ಹರಿದು ಹೋಗುತ್ತಿರುವ ನಾಗರ ಹಾವಿನ ನೆನಪಾಯಿತು.

ಊಟ ಮಾಡುತ್ತಿದ್ದಾಗಲೇ ವಾರ್ಡನ್ನಿನಿಂದ ಕಮಲಳಿಗೆ ಕರೆ ಬಂತು. ಆ ಮುಸ್ಲಿಂ ಹುಡುಗಿ ಬುಸುಗುಟ್ಟುತ್ತಾ ಹೋದಾಗಲೇ ವಾರ್ಡನ್ನಿನಿಂದ ಕಮಲಳಿಗೆ ಕರೆ ಬರುವುದೆಂದು ನಿರ್ಮಲ ಊಹಿಸಿದ್ದಳು.

"ಊಟ ಆಗ್ತಿದ್ದ ಹಾಗೆ ಕಮಲಮ್ಮನೋರು ವಾರ್ಡನನ್ನು ನೋಡ ಬೇಕಂತೆ."

ಆಳೊಬ್ಬ ಎಲ್ಲಾ ಹುಡುಗಿಯರ ಮುಂದೆ ನಿಂತುಕೊಂಡು ಹೇಳಿಹೋದ. ಕಮಲಳ ಅಕ್ಕಪಕ್ಕದಲ್ಲಿ ದ್ವಾರಪಾಲಕರಂತೆ ಕುಳಿತು ಮಜ್ಜಿಗೆ ಅನ್ನ ಕಲೆಸುತ್ತಿದ್ದ ನಿರ್ಮಲ, ಗಂಗ ಇಬ್ಬರೂ ಅವಳ ಕಡೆ ನೋಡಿದರು. ಕಮಲಳ ತುಂಟನಗೆ ಸೂಸುತ್ತಿದ್ದ ಮುಖದಲ್ಲಿ ಯಾವ ಬೆದರಿಕೆಯ ಚಿಹ್ನೆಯೂ ಇಲ್ಲದಿರುವುದನ್ನು ನೋಡಿ ಇಬ್ಬರೂ ಕ್ಷಣ ಕಾಲ ಊಟ ನಿಲ್ಲಿಸಿದರು.

"ಅನ್ಯಾಯವಾಗಿ ವಾರ್ಡನ್ ಕೈಲಿ ಬಯಸ್ಕೋತಿಯಲ್ಲಾ ಕಮಲಾ ?"

"ಅವರ ಹತ್ತಿರ ನಾನು ಅನ್ನಿಸಕೊಳ್ಳುತ್ತಾ ಇರೋದು ಇದೇ

ಮೊದಲನೆಯ ಸಲವೇನು? ನನಗೆ ಜ್ಞಾಪಕವಿದ್ದ ಹಾಗೆ ಗಲಾಟೆ ಮಾಡಿ ಅನ್ನಿಸಿ ಕೊಳ್ಳುತ್ತಾ ಇರೋದು ಹದಿನೆಂಟನೆ ಸಲ...."

ಕಮಲ ನಿರ್ವಿಕಾರಚಿತ್ತದಿಂದ ತಟ್ಟೆಯ ಮೂಲೆಯಲ್ಲಿದ್ದ ಅನ್ನದ ರಾಶಿ ಯನ್ನೆಳೆದುಕೊಂಡು ಎರಡನೆಯ ಬಾರಿ ಹುಳಿಯನ್ನ ಕಲೆಸಿದಳು.

ಕೋಣೆಯ ನಿಶ್ಶಬ್ದವಾದ ವಾತಾವರಣದಲ್ಲಿ ಹುಡುಗಿಯರು ಮೌನವಾಗಿ ಕುಳಿತು ಓದುತ್ತಿದ್ದರು. ದೂರದಲ್ಲಿ ನಾಯಿಗಳ ಬೊಗಳುವಿಕೆ ಆ ಹಾಸ್ಟಲ್ಲಿನ ಶಾಂತವಾದ ವಾತಾವರಣಕ್ಕೆ ಆಗಾಗ್ಯೆ ಭಂಗ ತರುತ್ತಿತ್ತು. ಸಮೀಪಿಸುತ್ತಿದ್ದ ಪರೀಕ್ಷೆಗೆ ಮನಸ್ಸಿಟ್ಟು ಓದುತ್ತಿದ್ದ ಹುಡುಗಿಯರಿಗೆ ಆ ಬೊಗುಳಾಟ, ಅವುಗಳ ಜಗಳ ಕೇಳಿಸುತ್ತಿರಲಿಲ್ಲ.

ಆದರೆ ಕಮಲಳಿಗೆ ಓದುವುದೆಂದರೆ ತಲೆನೋವು. ಪುಸ್ತಕವನ್ನು ಕೈಗೆ ತೆಗೆದುಕೊಂಡ ಐದು ನಿಮಿಷಗಳಲ್ಲಿ ಅವಳಿಗೆ ಸಹಿಸಲಾಗದ ತಲೆಶೂಲೆ ಪ್ರಾರಂಭ ವಾಗುತ್ತಿತ್ತು. ಕಾದಂಬರಿಯನ್ನಾಗಲೀ, ಚಲನಚಿತ್ರಕ್ಕೆ ಸಂಬಂಧಪಟ್ಟ ಪತ್ರಿಕೆ ಅಥವಾ ಪುಸ್ತಕಗಳನ್ನಾಗಲೀ ಓದುತ್ತಿದ್ದರೆ ಅವಳಿಗೆ ತಲೆಶೂಲೆಯ ಹಿಂಸೆಯಾಗು ತ್ತಿರಲಿಲ್ಲ. ಅಷ್ಟೇ ಅಲ್ಲದೆ ಮನರಂಜನೀಯವಾದ ಪುಸ್ತಕಗಳು ಅವಳ ಕೈಯೊಳಗಿ ದ್ದರೆ, ಅವಳಿಗೆ ಕಾಲ ಸವೆದದ್ದೇ ತಿಳಿಯುತ್ತಿರಲಿಲ್ಲ.

"ವಿಶ್ವವಿದ್ಯಾನಿಲಯದವರು ಈ ಹಾಳು ಪರೀಕ್ಷೆಗಳನ್ನು ಯಾತಕ್ಕಾಗಿ ಮಾಡುತ್ತಾರೋ?"

"ಅವರು ಏನು ಮಾಡಬೇಕು ಅಂತ ನೀನು ಹೇಳೋದು?"

ಓದುತ್ತಿದ್ದ ನಿರ್ಮಲ ಪುಸ್ತಕದಿಂದ ಮುಖ ತೆಗೆದು ಕೇಳಿದಳು.

"ವಿದ್ಯಾರ್ಥಿಗಳನ್ನು ಹಿಂಸಿಸುವ ಪರೀಕ್ಷೆಗಳನ್ನು ರದ್ದುಗೊಳಿಸಬೇಕು. ಪ್ರತಿ ವರ್ಷವೂ ವಿದ್ಯಾರ್ಥಿಗಳನ್ನು ಮುಂದಿನ ತರಗತಿಗಳಿಗೆ ತಳ್ಳಬೇಕು...."

"ನೀನು ಅದೃಷ್ಟವಿದ್ದು ವಿದ್ಯಾಮಂತ್ರಿಯಾದಾಗ ಹಾಗೇ ಮಾಡುವಿ ಯಂತೆ."

ನಿರ್ಮಲ ಮಾತು ಬೆಳೆಸುವ ಅಪೇಕ್ಷೆಯಿಲ್ಲದೆ ಮತ್ತೆ ಓದಿನಲ್ಲಿ ಮಗ್ನ ಳಾದಳು.

ಗಂಗ ಬಿಳಿಯ ಹಾಳೆಯ ಮೇಲೆ ಮಾನವನ ಅಸ್ಥಿಪಂಜರದ ಚಿತ್ರ ವೊಂದನ್ನು ಎಚ್ಚರಿಕೆಯಿಂದ ಬರೆಯುತ್ತಿದ್ದಳು.

"ಗಂಗ....ಏನು ಬರೆಯುತ್ತಾ ಇದ್ದೀಯ?"

ಗಂಗಳ ಮನಸ್ಸೆಲ್ಲಾ ಆ ಚಿತ್ರದಲ್ಲಿತ್ತು. ಕಮಲಳ ಮಾತಿಗೆ ಅವಳು

ಪ್ರತ್ಯುತ್ತರ ಕೊಡಲಿಲ್ಲ. ಕಮಲಳೊಡನೆ ಮಾತು ಪ್ರಾರಂಭಿಸಲು ಎಲ್ಲರೂ ಹೆದರುತ್ತಿದ್ದರು. ಕಾರಣ, ಅವಳು ಮಾತು ಮುಗಿಯದಂತೆ ಮಾಡಿಬಿಡುತ್ತಿದ್ದಳು. ಕೇಳಿಸಿದರೂ ಕಿವಿಗೆ ಬೀಳದಂತೆ ನಟಿಸಿ ಓದಿನಲ್ಲಿ ಮೈ ಮರೆಯುತ್ತಿದ್ದ ನಿರ್ಮಲಳು ಹಾಕಿಕೊಟ್ಟ ಹಾದಿಯನ್ನೇ ಹಿಡಿದಳು ಗಂಗ.

"ನನ್ನ ಸಂಗಡ ಮಾತನಾಡೋದಕ್ಕೆ ಯಾರಿಗೂ ಇಷ್ಟ ಇಲ್ವೆ?....ಯಾರ ಸಂಗಡವಾದರೂ ನಾನು ಮಾತನಾಡಲೇಬೇಕು ಈಗ. ಇಲ್ಲದಿದ್ದರೆ ಈ ಮೌನದಿಂದ ನನಗೆ ಹುಚ್ಚು ಹಿಡಿದು ಹೋಗುತ್ತೆ...."

ಕಮಲ ತನಗೆ ತಾನೇ ಮಾತನಾಡಿಕೊಂಡು ಪರೋಕ್ಷವಾದ ರೀತಿಯಲ್ಲಿ ಗೆಳತಿಯರನ್ನು ಹರಟೆಗೆ ಆಹ್ವಾನಿಸಿದಳು.

ಉಹುಂ, ಯಾರೂ ಕುಳಿತ ಕಡೆಯಿಂದ ಮಿಸುಕಾಡಲಿಲ್ಲ. ಪುಸ್ತಕದಲ್ಲಿ ನೆಟ್ಟಿದ್ದ ನಿರ್ಮಲಳ ಕಣ್ಣುಗಳು ಚಂಚಲವಾಗಿ ಅತ್ತಿತ್ತ ಓಡಾಡಲಿಲ್ಲ.

ಗಂಗ ಬೆನ್ನು ಬಗ್ಗಿಸಿ ಚಿತ್ರವನ್ನು ಬರೆಯುತ್ತಿದ್ದಳು. ಅವಳ ತದೇಕಚಿತ್ತಕ್ಕೆ ಕಮಲಳ ಮಾತು ಕೇಳಿಸಲಿಲ್ಲ.

"ನಿನ್ನ ಹೆಸರು ಜ್ಯೋತಿ ಎಂದು ನನಗಾಗಲೇ ಗೊತ್ತಾಯಿತು. ಎಷ್ಟು ಚೆನ್ನಾಗಿದೀಯ ನೀನು? ಬೆಳದಿಂಗಳ ದಿವಸ ಚಂದ್ರನ ಕಿರಣಗಳು ನಿನ್ನ ಮುಖದ ಮೇಲೆ ಬಿದ್ದಾಗಲಂತೂ ನೀನು ಎಷ್ಟು ಸುಂದರವಾಗಿ ಕಾಣಿಸ್ತೀಯ ಅಂತ? ನನ್ನ ಸಂಗಡ ನೀನು ಮಾತನಾಡದೇ ಹೋದರೂ ನಾನು ಒಬ್ಬರೊಡನೆ ಮಾತನಾಡ್ತಾ ಇದೀನಿ ಅನ್ನೋ ತೃಪ್ತಿ, ಸಮಾಧಾನ ನನಗಾಗತ್ತೆ...."

ಕಮಲಳ ತಡೆಯಿಲ್ಲದ ಮಾತು ಕೇಳಿ ಮೊದಲು ತಲೆ ಎತ್ತಿ ನೋಡಿದಳು ನಿರ್ಮಲ. 'ಈ ರೂಮಿನಲ್ಲಿ ಇರೋರು ನಾವು ಮೂವರೇ....ನಾವಿಬ್ಬರೂ ಓದುತ್ತಾ ಇದೀವಿ. ಕಮಲ ಯಾರ ಸಂಗಡ ಮಾತನಾಡ್ತಾ ಇದಾಳೆ?' ಎಂದು ಆಶ್ಚರ್ಯದಿಂದ ನಿರ್ಮಲ ಕಮಲಳ ಕಡೆ ನೋಡಿದಳು. ಗಂಗಳ ವಿಸ್ಮಯ ತುಂಬಿದ ಗುಂಡು ಮುಖವೂ ಕಮಲಳನ್ನೇ ನೋಡುತ್ತಿರುವುದನ್ನೂ ನಿರ್ಮಲ ಗಮನಿಸಿದಳು.

ಗಂಗ, ನಿರ್ಮಲರ ಕಣ್ಣುಗಳು ಕಂಡಿದ್ದೇನು?

ಕಮಲ ಮಾತನಾಡುತ್ತಿದ್ದುದು ಒಂದು ತಲೆ ಬರುಡೆಯ ಸಂಗಡ ಎಂದು ಇಬ್ಬರಿಗೂ ತಿಳಿಯಿತು. ಆ ಬುರುಡೆ ಹಲ್ಲು ಕಿರಿಯುತ್ತಾ ಕಮಲಳ ಮುಂದಿದ್ದ ಮೇಜಿನ ಮೇಲೆ ಕುಳಿತಿತ್ತು. ಆ ತಲೆಬರುಡೆಯ ಸಮೀಪಕ್ಕೆ ತನ್ನ ಮುಖವನ್ನೊಯ್ದು ಮಾತನಾಡುತ್ತಿದ್ದ ಕಮಲಳನ್ನು ನೋಡಿ ಗಂಗೆಗೆ ನಗುವಂತಾಯಿತು.

ಸೆರಗಿನ ಕೊನೆಯನ್ನು ಬಾಯೊಳಗಿಟ್ಟು ನಗುವನ್ನು ನುಂಗಲು ವಿಶ್ವಪ್ರಯತ್ನ ಪಡುತ್ತಿದ್ದ ನಿರ್ಮಲಳನ್ನು ನೋಡಿ ಗಂಗೆಯೂ ಬಿರಿಯುತ್ತಿದ್ದ ತನ್ನ ಬಾಯನ್ನು ಬಿಗಿಯಾಗಿ ಅದುಮಿ ಹಿಡಿದಳು–ತಮ್ಮ ನಗು ಅವಳ ಮಾತಿಗೆಲ್ಲಿ ಭಂಗತರುವುದೋ ಎಂಬ ಭಯ ಅವರಿಗೆ.

ಒಂದು ಗಂಟೆಯ ಕಾಲ ಕಮಲ ಆ ತಲೆಬುರುಡೆಯೊಂದಿಗೆ ಮಾತನಾಡಿದಳು. ತನ್ನ ಜೀವನ ಚರಿತ್ರೆಯನ್ನೆಲ್ಲಾ ಅದರ ಮುಂದಿಟ್ಟಳು. ಆ ತಲೆಬುರುಡೆಯ ಚರಿತ್ರೆಯನ್ನೆಲ್ಲಾ ಕಲ್ಪಿಸಿಕೊಂಡಳು. ಕಮಲಳ ಮಾತು ನಿರಾತಂಕವಾಗಿ ಮುಂದುವರಿಯಿತು. ಅವಳು ಆ ಕೋಣೆಯಲ್ಲಿಲ್ಲವೆಂದೇ ಭಾವಿಸಿಕೊಂಡು ನಿರ್ಮಲ, ಗಂಗ ಇಬ್ಬರೂ ತಮ್ಮ ಓದನ್ನು ಮುಂದುವರಿಸಿದರು.

ಗಂಗ ಮಾನವನ ಅಸ್ಥಿಪಂಜರದ ಚಿತ್ರವನ್ನು ಬರೆದು ಮುಗಿಸಿದ ಮೇಲೆ, ಅವಳಿಗೆ ಕಮಲಳ ನೆನಪಾಯಿತು.

ತಿರುಗಿ ಕಮಲ ಕುಳಿತಿದ್ದ ಮೇಜಿನ ಕಡೆ ನೋಡಿದಾಗ ಕಮಲ ಆ ತಲೆ ಬುರುಡೆಯ ಮುಂದೆ ತನ್ನ ತಲೆಯಿಟ್ಟು ನಿದ್ರಿಸುತ್ತಿದ್ದಳು. ಆದರೆ ಅವಳನ್ನು ನೋಡಿ ಆ ತಲೆಬುರುಡೆ ಹಲ್ಲು ಕಿರಿಯುತ್ತಲೇ ಇತ್ತು.

* * * *

ಅನಾಟಮಿ ತರಗತಿಯನ್ನು ಮುಗಿಸಿಕೊಂಡು ಗಂಗ ಹೊರಗೆ ಬಂದಾಗ ಬಾಗಿಲ ಬಳಿ ಎಂದಿನಂತೆ ಯುವಕರ ತಂಡ ಹುಡುಗಿಯರಿಗೆ ಸಿಳ್ಳಿನ ಸ್ವಾಗತ ಕೋರಿತು. ಗಂಗ ತಲೆತಗ್ಗಿಸಿ ಮುಂದೆ ಹೆಜ್ಜೆಹಾಕಿದಳು. ಹುಡುಗಿಯರನ್ನು ಹಿಂಬಾಲಿಸುತ್ತಾ, ಬೆನ್ನ ಹಿಂದೆ ನಿಂತು ಟೀಕೆ ಮಾಡುತ್ತಾ ತಮ್ಮ ಕಪಿತ್ವವನ್ನು ಹುಡುಗಿಯರಿಗೆ ಪರಿಚಯ ಮಾಡಿ ಕೊಡುವ ಹುಡುಗರ ಸ್ನೇಹ ಮಾಡಿಕೊಳ್ಳುವ ಆಕಾಂಕ್ಷೆ ಗಂಗೆಗಿರಲಿಲ್ಲ. ನುಂಗುವಂತೆ ನೋಡುತ್ತಾ, ಮಂಗಗಳಂತೆ ನಿಂತಿದ್ದ ಧೂರ್ತ ಹುಡುಗರ ನೆಟ್ಟ ನೋಟಗಳನ್ನು ಎದುರಿಸುವ ಧೈರ್ಯ ಸಾಲದೆ ಗಂಗ ತಲೆತಗ್ಗಿಸಿ ಹೆಜ್ಜೆ ಹಾಕಿದಳು. ಮೆಡಿಕಲ್ ಕಾಲೇಜು ಸೇರಿದ ಮೇಲೆ ಗಂಗ ಸೀರೆಯನ್ನುಟ್ಟಳು. ನಡೆಯುವಾಗಲೆಲ್ಲಾ ನೆಲದತ್ತ ನೋಡುತ್ತಿದ್ದ ಕಣ್ಣುಗಳಿಂದ ಅವಳು ಗಮನಿಸುತ್ತಿದ್ದಳು.

"ನಮಸ್ಕಾರ...."

ಗಂಗಳ ಮುಂದೆ ಚಿಗುರು ಮೀಸೆಯ, ತೆಳ್ಳನೆಯ ಮೈಕಟ್ಟಿನ ಹುಡುಗನೊಬ್ಬ ನಿಂತು ಕೈ ಜೋಡಿಸಿದ. ನೆಲ ನೋಡುತ್ತಾ ನಡೆಯುತ್ತಿದ್ದ ಗಂಗೆಗೆ ಮೊದಲು ಕಾಣಿಸಿದ್ದು ಆ ಹುಡುಗನ ಪಾದರಕ್ಷೆಗಳಿಲ್ಲದ ಎರಡು ಕಾಲುಗಳು.

ಧಾನವಾಗಿ ತಲೆಯೆತ್ತಿ ಆತನ ಮುಖವನ್ನು ನೋಡಿ ಆಶ್ಚರ್ಯದಿಂದ ಕಣ್ಣರಳಿಸಿ ಕೈ ಜೋಡಿಸಿದಳು.

"ನಾನು ಯಾರೂ ಅಂತ ನಿನಗೆ ಗೊತ್ತಾಗಲಿಲ್ವೆ ಗಂಗ ?"

"ಇಲ್ಲ." ಗಂಗ ಅನುಮಾನಿಸುತ್ತಾ ತಲೆಯಲುಗಿಸಿದಳು.

"ನಾನು....ಅನಂತು...." ಆ ಹುಡುಗನ ತೆಳುವಾದ ತುಟಿಗಳು ಬಿರಿದು, ಬಿಳಿಯ ಮುತ್ತುಗಳಂತಿದ್ದ ಅವನ ಹಲ್ಲುಗಳನ್ನು ಪ್ರದರ್ಶಿಸಿದವು.

"ಯಾರು ?"

ಗಂಗ ಮತ್ತೆ ಪ್ರಶ್ನೆ ಹಾಕಿದಳು.

"ಪದ್ಮಾವತಮ್ಮನವರ ಮಗ ಅನಂತು....ಮಾಲಿನಿ ಅಣ್ಣ...."

"ಓ ! ಎಷ್ಟೊಂದು ಎತ್ತರವಾಗಿ ಬೆಳೆದು ಬಿಟ್ಟಿದ್ದೀಯಾ ಅನಂತು !! ನಿಮ್ಮ ತಂದೆ ತಾಯಿ ಎಲ್ಲಾ ಚೆನ್ನಾಗಿದ್ದಾರಾ ? ಮಾಲಿನಿ ಮದುವೆಗೆ ನನಗೆ ಬರೋದಿಕ್ಕೇ ಆಗಲಿಲ್ಲ. ನೀನೂ ಎಂ. ಬಿ. ಬಿ. ಎಸ್. ಓದುತ್ತಾ ಇದ್ದೀಯೇನು ?"

ಗಂಗಳ ಸಂಕೋಚ ಮರೆಯಾಯಿತು. ಅನಂತುವನ್ನು ಬಹಳ ಆತ್ಮೀಯವಾಗಿ ಮಾತನಾಡಿಸಿದಳು.

"ಎಲ್ಲಾ ಚೆನ್ನಾಗಿದ್ದಾರೆ. ಮಾಲಿನೀಗೆ ಈಗ ಆರುತಿಂಗಳಿನ ಒಂದು ಗಂಡು ಇದೆ. ಮಗು ತುಂಬಾ ಚೆನ್ನಾಗಿದೆ. ನಾನು ಎರಡನೆಯ ವರ್ಷದ ಎಂ.ಬೀ.ಲಿ ಓದುತ್ತಿದ್ದೇನೆ."

"ಓ ! ಆಗಲೇ ಮಾಲಿನಿ ಮುದ್ದು ಮಗುವಿನ ತಾಯಿಯಾಗ್ಬಿಟ್ಳಾ ?"

ಗಂಗ ಸಂಭ್ರಮದಿಂದ ಕಣ್ಣರಳಿಸಿದಳು. ಸಂಭ್ರಮದ ಬೆನ್ನು ಹಿಡಿದು ಬಂದ ನಿರಾಶೆಯ ಎಳೆಯೊಂದು ಅವಳ ಸಂತೋಷವನ್ನು ಕತ್ತರಿಸಿ ಹಾಕಿತು.

ಹೋದ ವರ್ಷ ಮದುವೆಯಾಗಿ, ಗೃಹಣಿಯೆನಿಸಿಕೊಂಡಿದ್ದ ತನ್ನ ಬಾಲ್ಯದ ಗೆಳತಿ ಸಹಪಾಠಿ ಆಗಲೇ ಮಗುವಿನ ತಾಯಿ !

ಮದುವೆಯಾಗಿ ಎಲ್ಲರಂತೆ ಗೃಹಣಿಯಾಗಿ ಬಾಳ್ವೆ ಮಾಡಬೇಕೆಂಬಾಸೆಯೂ ಗಂಗಳಿಗಿತ್ತು. ಆದರೆ ಕುಂಟು ಕಾಲಿನ ತನ್ನನ್ನು ಯಾರು ಕೈಹಿಡಿಯುತ್ತಾರೆ ? ಎಂಬ ಅಳುಕೂ ಅವಳಿಗಿತ್ತು. 'ಮದುವೆ' ಎಂಬ ಪದವನ್ನೇ ಮರೆತು ವೈದ್ಯಳಾಗಬೇಕೆಂದು ನಿರ್ಧರಿಸಿಕೊಂಡು, ಓದಿನಲ್ಲಿ ಆಸಕ್ತಿ ಇಟ್ಟುಕೊಂಡಿದ್ದರೂ, ಆಗಾಗ್ಗೆ ಗಂಗಳ ಸುಪ್ತ ಬಯಕೆಗಳು ಹೆಡೆ ಎತ್ತಿ ನಿಲ್ಲುತ್ತಿದ್ದವು.

"ಮಾಲಿನಿಯಾಗಲೇ ತಾಯಿ. ತಾಯಿ ಪದವಿಗಿಂತ ಹೆಂಗಸಿಗೆ ಮತ್ಯಾವ ಪದವಿಯೂ ಬೇಡ...."

ಪಕ್ಕದಲ್ಲಿ ನಡೆದು ಬರುತ್ತಿದ್ದ ಅನಂತುವನ್ನೂ ಮರೆತು ಗಂಗ ಹಗಲುಗನಸು ಕಾಣತೊಡಗಿದಳು.

"ಯಾಕೆ ಗಂಗ....ಸುಮ್ನಾಗಿಬಿಟ್ಟೆ ?...."

ಅನಂತು ಧೈರ್ಯ ವಹಿಸಿ ಗಂಗಳನ್ನು ಏಕವಚನದಲ್ಲೇ ಮಾತನಾಡಿಸಿದ. ಅದನ್ನು ಗಂಗ ಗಮನಿಸಲೂ ಇಲ್ಲ. ಅವಳಿಗೇ ತಿಳಿಯದಂತೆ ಅವಳ ನಾಲಿಗೆ ಅನಂತುವಿನೊಡನೆ ಏಕವಚನದಲ್ಲೇ ಸಂಭಾಷಣೆಗೆ ಪ್ರಾರಂಭಿಸಿತು.

"ಏನಿಲ್ಲ....ಈಗ ನೀನು ಹಾಸ್ಟಲಿನಲ್ಲಿದೀಯಾ ?"

"ಇಲ್ಲ ಗಂಗ....ಹಾಸ್ಟಲ್ಲಿಗೆ ನಾನು ದುಡ್ಡು ಎಲ್ಲಿಂದ ತರಲಿ ? ಒಂದು ರೂಮು ಮಾಡಿಕೊಂಡಿದ್ದೇನೆ. ಅಲ್ಲೇ ಅಡಿಗೆಯನ್ನೂ ನಾನೇಮಾಡ್ಕೋ ತೀನಿ...."

ಗಂಗಳ ದೃಷ್ಟಿ ಅನಂತುವಿನ ಸರಳವಾದ ಉಡುಪಿನ ಮೇಲೆ ಓಡಾಡಿತು. ಬಿಳಿಯ ಪೈಜಾಮು, ಬಿಳಿಯ ನಿಲುವಂಗಿಯನ್ನು ಹಾಕಿಕೊಂಡು ಎದುರಿಗೆ ನಿಂತಿದ್ದ ಅನಂತುವನ್ನು ನೋಡಿ ಗಂಗಳಿಗೆ ಕನಿಕರವಾಯಿತು. ಅವನ ಬಟ್ಟೆಗಳಿಗೆ ಇಸ್ತ್ರಿ ಇರಲಿಲ್ಲ. ಆಗ ಪದ್ಮಾವತಮ್ಮನವರ ಬಡ ಸಂಸಾರದ ನೆನಪು ಮತ್ತೆ ಗಂಗೆಯ ಮನಸ್ಸಿನಲ್ಲಿ ಮರುಕಳಿಸಿತು.

"ಶ್ಯಾಮು ಏನು ಮಾಡ್ತಾ ಇದಾನೆ ?"

"ಈ ಸಲ ಐದನೆಯ ಸಲ ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಹೋಗಿದ್ದಾನೆ...."

"ಬರ್ತೀಯಾ ಗಂಗ.... ?"

ಹುಡುಗಿಯೊಬ್ಬಳು ಗಂಗಳನ್ನು ಕೇಳಿದಳು.

"ಹೂಂ....ಬರ್ತೀನಿ ಅನಂತೂ...."

ಗಂಗ ಆ ಹುಡುಗಿಯ ಸಂಗಡ ಹೊರಟು ಹೋದಳು. ಕುಂಟುತ್ತಾ ಮುಂದೆ ಸಾಗುತ್ತಿದ್ದ ಗಂಗಳನ್ನೇ ನೋಡುತ್ತಾ ಗೋಡೆಗೊರಗಿ ನಿಂತಿದ್ದ ಅನಂತುವಿನ ಬೆನ್ನುತಟ್ಟಿದ ವಿಶ್ವ.

"ನಿನ್ನ ಅಭಿರುಚಿ ಮೆಚ್ಚಿದೆ ಅನಂತು. ಆದರೆ....ಆ ಹುಡುಗಿಯ ಕಾಲಿಗೆ ಏನಾಗಿದೆ ?"

ವಿಶ್ವನಾಥ ಕುತೂಹಲದಿಂದ ಅನಂತೂನ ಕೇಳಿದ.

"ತಪ್ಪು ತಿಳಿದುಕೊಳ್ಳಬೇಡ ವಿಶ್ವ. ಆ ಹುಡುಗಿಯ ಹೆಸರು ಗಂಗ. ಆಕೆ

ಮನ್ನ ನಾನು ನಾಲ್ಕು ವರ್ಷದ ಮಗುವಿನಿಂದ ಬಲ್ಲೆ. ಚಿಕ್ಕ ವಯಸ್ಸಿನಲ್ಲಿ ಪೋಲಿಯೋ ಕಾಯಿಲೆಯಾಗಿ ಅವಳಿಗೆ ಬಲಗಾಲು ಹೋಯಿತು."

"ಪಾಪ! ಇಂತಹ ಮುದ್ದಾದ ಹುಡುಗೀಗೆ ದೇವರು ಎಂತಹ ಅನ್ಯಾಯ ಮಾಡಿಬಿಟ್ಟಿದ್ದಾನೆ!"

ವಿಶ್ವನಾಥ ಸಹಾನುಭೂತಿಯಿಂದ ಲೊಚಗುಟ್ಟಿದ.

"ಆ ಹುಡುಗಿ ನನ್ನ ಸಹಪಾಠಿ. ಇದುವರೆವಿಗೂ ಒಬ್ಬನ ಸಂಗಡ ಅವಳು ಮಾತನಾಡಿದ್ದನ್ನು ನಾನು ನೋಡಿಲ್ಲ. ತಾನಾಯಿತು....ಪಾಠವಾಯಿತು. ಮಿಕ್ಕ ಹುಡುಗಿಯರಂತೆ ಬೆಡಗು ಬಿನ್ನಾಣವನ್ನಾಗಲೀ, ಹಾವಭಾವಗಳನ್ನಾಗಲೀ ಪ್ರದರ್ಶಿಸದೆ ತನ್ನ ಪಾಡಿಗೆ ತಾನಿರುತ್ತಾಳೆ. ನಿನ್ನನ್ನು ಮಾತನಾಡಿಸುತ್ತಿರುವು ದನ್ನು ನೋಡಿ ಕ್ಷಣಕಾಲ ನನ್ನ ಎದೆಯ ಬಡಿತವೇ ನಿಂತುಹೋಗಿತ್ತು...."

ವಿಶ್ವನಾಥ ಎದೆ ಮುಟ್ಟಿ ನೋಡಿಕೊಂಡ.

"ಚಿಕ್ಕವಯಸ್ಸಿನಲ್ಲಿ....ಹಲವಾರು ವರ್ಷಗಳ ಹಿಂದೆ, ಅವಳಿಗೆ ನಿಲ್ಲುವುದಕ್ಕೇ ಆಗುತ್ತಿರಲಿಲ್ಲ ವಿಶ್ವ. ಅವಳು ಕುಂಟುತ್ತಾ ನಡೆಯುವ ಮಟ್ಟಿಗಾಗುತ್ತಾಳೆಂದು ನಾನೂ ಖಂಡಿತವಾಗಿ ನಿರೀಕ್ಷೆ ಮಾಡಿರಲಿಲ್ಲ."

* * * *

ಉಪಾಧ್ಯಾಯರೊಬ್ಬರು ಮೆದುಳಿನ ವಿಷಯವಾಗಿ ಮಾತನಾಡುತ್ತಿದ್ದರು. ಅವರ ಗಡಸು ಧ್ವನಿಯನ್ನು ಕೇಳಿ ಕೇಳಿ ವಿಶ್ವನಾಥನಿಗೆ ತಲೆನೋವು ಪ್ರಾರಂಭ ವಾಗಿತ್ತು. ಮನಸ್ಸಿಗೆ ಅವರ ಪಾಠ ಬೇಕಿಲ್ಲದಿದ್ದರೂ ಎಲ್ಲ ಹುಡುಗರೊಡನೆ ಕುಳಿತಿದ್ದ ವಿಶ್ವ, ಅತ್ತ ಇತ್ತ ಹರಿದಾಡಿದ ಅವನ ವಿಶಾಲವಾದ ಕಣ್ಣುಗಳು ಮೊದಲನೆಯ ಬೆಂಚಿನಲ್ಲಿ ಮುದುಡಿ, ತಲೆ ತಗ್ಗಿಸಿ ಕುಳಿತಿದ್ದ ಗಂಗಳಲ್ಲಿ ಬಂದು ನಿಂತಿತು.

ಚಂಚಲವಾದ ಕಣ್ಣುಗಳಿಗೂ ಕಡಿವಾಣ ಹಾಕಿ ನಿಲ್ಲಿಸುವ ಶಕ್ತಿ ಗಂಗಳ ಮುದ್ದಾದ ದುಂಡು ಮುಖಕ್ಕಿತ್ತು.

ವಿಶ್ವನಾಥ ಗಂಗಳನ್ನೇ ನೋಡುತ್ತಾ ಕುಳಿತುಗೊಂಡ ಮೇಲೆ ಅವನಿಗೆ ತಲೆ ನೋವು ಸ್ವಲ್ಪ ಕಡಿಮೆಯಾದಂತಾಯಿತು.

ದುಂಡು ಮುಖ....ಆ ಮುಖದಲ್ಲಿ ಹೊಳೆಯುತ್ತಿದ್ದ ಎರಡು ಕಣ್ಣುಗಳು.... ಕಣ್ಣುಗಳ ಕೆಳಗೆ ಗುಲಾಬಿಯ ಮೊಗ್ಗಿನಂತಿದ್ದ ಬಗ್ಗಿದ ಆ ಪುಟ್ಟ ಮೂಗು.... ಮೂಗಿನಷ್ಟೇ ಪುಟ್ಟದಾದ ಆ ಬಾಯಿ....ಮಗುವಿನ ಮುಗ್ಧತೆ ಆ ಹುಡುಗಿಯ

ಮುಖದ ತುಂಬಾ ಹರಿಡಿತ್ತು. ಆ ಮುಖದ ಎರಡು ಪಕ್ಕದಲ್ಲೂ ಇಳಿಬಿದ್ದಿದ್ದ ಎರಡು ಮೋಟು ಜಡೆಗಳಿದ್ದವು....

ವಿಶ್ವ ಗಂಗಳನ್ನೇ ನೋಡುತ್ತಾ ಮೈಮರೆತ.

"ಮುದ್ದಾದ ಹುಡುಗಿ....ಆದರೆ....ದೇವರು ಎಂತಹ ಅನ್ಯಾಯ ಮಾಡಿ ಬಿಟ್ಟ...."

ತಾನು ಎಲ್ಲರೊಡನೆ ತರಗತಿಯಲ್ಲಿ ಕುಳಿತಿದ್ದೇನೆ ಎನ್ನುವುದನ್ನೇ ಮರೆತು ವಿಶ್ವ ತನಗೆ ತಾನೇ ಮಾತನಾಡಿಕೊಂಡ.

"ಏನೋ ಅದು ನಿನ್ನ ಗೊಣಗಾಟ....?"

ವಿಶ್ವನ ಪಕ್ಕದಲ್ಲಿ ಕುಳಿತಿದ್ದ ಮೋಹನ್ ಕೇಳಿದ.

"ಇವರ ಪಾಠ ಕೇಳಿ ನನಗೆ ತಲೆನೋವು ಬಂತು ಅಂತಂದೆ...."

ವಿಶ್ವ ಪರಿಸ್ಥಿತಿಯಿಂದ ಪಾರಾಗಲು ಸುಳ್ಳಾಡಿದ.

ತರಗತಿಯಿಂದ ಎಲ್ಲರಿಗಿಂತ ಮೊದಲು ಹೊರಗೆ ತಳ್ಳಿಕೊಂಡು ಬಂದ ವಿಶ್ವ ಆತುರವಾಗಿ ಜೋಬಿನಲ್ಲಿದ್ದ ಸಿಗರೇಟನ್ನು ಕೈಗೆ ತೆಗೆದುಕೊಂಡು ಹತ್ತಿಸಿದ, ಮನಸ್ಸಿಗಾದ ಬೇಸರವನ್ನು ಸಿಗರೇಟು ಸೇದಿ ಹೊಗೆ ಬಿಡುವುದರ ಮೂಲಕ ಹೋಗಲಾಡಿಸಲು ಅವನು ಮನಸ್ಸು ಮಾಡಿದ.

* * * *

ವಿಶ್ವನಾಥ ಹಾಸನದಲ್ಲಿ ಹೆಸರುವಾಸಿಯಾಗಿದ್ದ ಡಾಕ್ಟರ್ ವೆಂಕಟರಾಮಯ್ಯ ನವರ ಮಗ. ವೆಂಕಟರಾಮಯ್ಯನವರು ಚಿಕ್ಕವಯಸ್ಸಿನಲ್ಲೇ ಹೆಂಡತಿಯನ್ನು ಕಳೆದುಕೊಂಡು ಮರು ಮದುವೆಯಾಗಿದ್ದರು. ಮೊದಲನೆಯ ಮದುವೆಯಿಂದ ಅವರಿಗೆ ಹುಟ್ಟಿದವನೇ ವಿಶ್ವ. ಅವರ ಎರಡನೆಯ ಹೆಂಡತಿ ನರಸಮ್ಮನಿಗೆ ಮಕ್ಕಳಾಗಲಿಲ್ಲ. ಆಕೆ ವಿಶ್ವನಾಥನ ಬಲತಾಯಿಯಾಗಿದ್ದರೂ, ಅವನನ್ನು ಹೆತ್ತ ತಾಯಿಗಿಂತ ಮೇಲಾಗಿ ನೋಡಿಕೊಳ್ಳುತ್ತಿದ್ದರು. ಹೆತ್ತ ತಾಯಿಯ ನೆನಪೇ ಇಲ್ಲದ ವಿಶ್ವ ಬಲತಾಯಿಯ ಪ್ರೇಮದಲ್ಲಿ ಸುಖಿಯಾದ. ಮಕ್ಕಳಿಲ್ಲದ ಆಕೆಗೆ ತಾಯಿಯನ್ನು ಕಳೆದುಕೊಂಡಿದ್ದ ವಿಶ್ವನಾಥ ಅಕ್ಕರೆಯ ಮಗನಾದ. ಆಕೆಯೂ ವಿಶ್ವನಾಥನಿಗೆ ಹತ್ತು ವರ್ಷ ನಡೆಯುತ್ತಿದ್ದಾಗ ದೈವಾಧೀನರಾದರು.

ಸಂಸಾರದಲ್ಲಿ ಯಾವ ವಿಧವಾದ ಕಾರ್ಪಣ್ಯವೂ ಇಲ್ಲದೆ ಜೀವನದಲ್ಲಿ ವೆಂಕಟರಾಮಯ್ಯನವರು ತುಂಬಾ ಸುಖಿಯಾಗಿದ್ದರು. ಕೈ ತುಂಬ ಸಂಪಾದಿಸು ತ್ತಿದ್ದುದರಿಂದ ಮನೆಯಲ್ಲಿ ದಾರಿದ್ರ್ಯದ ಕಾಟವಿರಲಿಲ್ಲ. ಆದರೆ ಅವರಿಗಿದ್ದುದು ಒಂದೇ ಒಂದು ಆಸೆ. ಅದು ತಮ್ಮಂತೆ ಮಗನೂ ವೈದ್ಯನಾಗಬೇಕು....ತಾವ

ರೆಯಲಿರುವ 'ನರ್ಸಿಂಗ್ ಹೋಂ'ಗೆ ಮಗನು ವೈದ್ಯನಾಗಿ ಬಂದು ಸಹಾಯಕ
ಾಗಿ ನಿಲ್ಲಬೇಕು....ಸದಾ ಕಾಲವೂ ಇದನ್ನೇ ಯೋಚಿಸುತ್ತಿದ್ದ ತಂದೆಯನ್ನು
ಶ್ವ ಸಂಪೂರ್ಣವಾಗಿ ಅರ್ಥಮಾಡಿಕೊಂಡಿದ್ದ.

ಇದ್ದ ಒಬ್ಬನೇ ಮಗನನ್ನು ದೂರ ಕಳುಹಿಸುವ ಅಪೇಕ್ಷೆಯೂ ಆ ತಂದೆಗಿರ
ಲ್ಲ.

ಆದರೆ ವಿಶ್ವನ ಮನಸ್ಸೆಲ್ಲ ಮನಶ್ಶಾಸ್ತ್ರದಲ್ಲಿ ಐಕ್ಯವಾಗಿ ಹೋಗಿತ್ತು. ವೈದ್ಯ
ೀಯದಲ್ಲಿ ಅವನಿಗೆ ಸ್ವಲ್ಪವೂ ಆಸಕ್ತಿಯಿರಲಿಲ್ಲ. ಅವನ ಬೀರುವಿನ ತುಂಬ
ುನಶ್ಶಾಸ್ತ್ರಕ್ಕೆ ಸಂಬಂಧಪಟ್ಟ ಪುಸ್ತಕಗಳೇ ತುಂಬಿರುತ್ತಿದ್ದವು. ಹಲವಾರು
ುಗೆಯ ಮನೋರೋಗಗಳ ವಿಷಯವಾಗಿ ಓದಿದಷ್ಟೂ ವಿಶ್ವನಾಥನ ಕುತೂಹಲ
ೆರಳುತ್ತಿತ್ತು.

ಶ್ರಮವಹಿಸಿ ವೆಂಕಟರಾಮಯ್ಯನವರು ಮೆಡಿಕಲ್ ಕಾಲೇಜಿನಲ್ಲಿ ಮಗನಿಗೆ
ಸ್ಥಳಾವಕಾಶವನ್ನು ದೊರಕಿಸಿಕೊಟ್ಟರು. ತಂದೆಗೆ ಪ್ರತಿಯಾಗಿ ನಡೆದು ಅವರಿಗೆ
ಿರಾಶೆಯುಂಟುಮಾಡುವ ಅಪೇಕ್ಷೆಯಿಲ್ಲದೆ ವಿಶ್ವನಾಥ ತನ್ನಾಸೆಯನ್ನು ಹೃದಯ
ಲ್ಲೇ ಅದುಮಿಟ್ಟ. ಮನಶ್ಶಾಸ್ತ್ರವನ್ನು ಓದಿ ಪಧವೀಧರನಾಗಬೇಕೆಂದು ಹಗಲು
ನಸು ಕಾಣುತ್ತಿದ್ದ ವಿಶ್ವನ ಆಸೆ ಮಣ್ಣುಗೂಡಿತು. ಒಲ್ಲದ ಮನಸ್ಸಿನಿಂದ
ಅವನು ಮೆಡಿಕಲ್ ಕಾಲೇಜನ್ನು ಸೇರಿಕೊಂಡ. ಏಟು ತಿಂದ ಮೂಕ ಜಂತುವಿ
ಂತೆ ಮೌನವಾಗಿ ಮನದ ವೇದನೆಯನ್ನು ಅನುಭವಿಸಿದ.

ಹಾಸನದಲ್ಲಿ ಹೈಸ್ಕೂಲ್ ಉಪಾಧ್ಯಾಯರ ಮಗ ಅನಂತುವಿನ ಪರಿಚಯ
ಿಶ್ವನಾಥನಿಗೆ ನಾಲ್ಕಾರು ವರ್ಷಗಳಿಂದಿದ್ದವು. ಬಡತನದಲ್ಲಿ ತೊಳಲುತ್ತಿದ್ದರೂ
ತನ್ನ ಅಸಾಧಾರಣವಾದ ಬುದ್ಧಿಶಕ್ತಿಯಿಂದ ಅನಂತು ಮೆಡಿಕಲ್ ಕಾಲೇಜಿನಲ್ಲಿ
ೆಚ್ಚು ಕಷ್ಟವಿಲ್ಲದೆ ಸ್ಥಳಾವಕಾಶವನ್ನು ದೊರಕಿಸಿಕೊಂಡಿದ್ದ.

ಆದರೆ ವಿಶ್ವ ?

ಬೇಕಿಲ್ಲದ ವೈದ್ಯಕೀಯ ವ್ಯಾಸಂಗದಲ್ಲಿ ಅವನಿಗೆ ಸ್ವಲ್ಪವೂ ಆಸಕ್ತಿಯಿರ
ಿಲ್ಲ. ಹಾಸ್ಟಲಿನಲ್ಲಿದ್ದುಕೊಂಡು ತಂದೆಯ ಆಸೆಯನ್ನು ನೆರವೇರಿಸಲು ಮೆಡಿಕಲ್
ಕಾಲೇಜಿಗೆ ವಿಶ್ವನಾಥ ಸೇರಿಕೊಂಡ. ಚಿಕ್ಕ ರೂಮಿನಲ್ಲಿ ತಾನೇ ಅಡಿಗೆಯನ್ನು
ಮಾಡಿಕೊಂಡು ಓದುತ್ತಿದ್ದರೂ ಅನಂತು ಸಾಯಂಕಾಲದಲ್ಲಿ, ಕಾಲೇಜಿನಲ್ಲಿ,
ಆಗಾಗ್ಗೆ ವಿಶ್ವನನ್ನು ಭೇಟಿಯಾಗುತ್ತಿದ್ದ.

ವಿದ್ಯಾಭ್ಯಾಸದ ವಿಷಯದಲ್ಲಿ ಗೆಳೆಯ ವಿಶ್ವನಿಗಾದ ನಿರಾಶೆಯೇನೆಂದು
ಅನಂತುವಿಗೆ ತಿಳಿದಿತ್ತು. ಆದರೆ ಯಾವ ವಿಧದಲ್ಲೂ ಅವನು ಸ್ನೇಹಿತನಿಗೆ

ಸಹಾಯಮಾಡಲಾರದವನಾದ. ಆದರೂ ಆಗಾಗ್ಗೆ ವಿಶ್ವನ ಹೃದಯದಲ್ಲಿ ಮನೆ ಮಾಡಿಕೊಂಡಿದ್ದ ನಿರಾಶೆ ಹಾಗೂ ನಿರುತ್ಸಾಹವನ್ನು ಅನಂತು ತನ್ನ ಮಾತುಗಳ ಮೂಲಕ ಹೊಡೆದೋಡಿಸುವ ಪ್ರಯತ್ನಮಾಡುತ್ತಿದ್ದ.

" 'ಪಾಲಿಗೆಬಂದದ್ದು ಪಂಚಾಮೃತ' ಎಂದು ತಿಳಿದು ನಡೆದುಕೊಳ್ಳಬೇಕು ವಿಶ್ವ. ನಿನಗೆ ವಿದ್ಯಾಭ್ಯಾಸದಲ್ಲಾದ ನಿರಾಶೆಯನ್ನೇ ಕುರಿತು ಯೋಚಿಸುತ್ತಾ ನಿನ್ನ ಭವಿಷ್ಯವನ್ನೇ ನೀನು ಅನ್ಯಾಯವಾಗಿ ಹಾಳುಮಾಡಿಕೊಳ್ಳುತ್ತಿದ್ದೀಯ...."

"ಈ ಕೊಳಕು ಕಸಬು ಯಾರಿಗೆ ಬೇಕಾಗಿದೆ ಹೇಳು ಅನಂತು ? ಇದೆಲ್ಲಾ ನನಗೆ ಸರಿಬೀಳುವುದಿಲ್ಲ...." ಜಿಗುಪ್ಸೆಯಿಂದ ಮುಖವನ್ನು ವಕ್ರಮಾಡಿದ ವಿಶ್ವ ಅಸಹನೆಯಿಂದ ಧ್ವನಿಯನ್ನು ಎತ್ತರಿಸಿ ಹೇಳಿದ.

"ಡಾಕ್ಟರ್ ಕಸಬು ಕೊಳಕು ಅಂತೀಯಲ್ಲಾ ವಿಶ್ವ....ನಿನ್ನಂತೆ ಯಾರಿಗೂ ಈ ಕೆಲಸ ಬೇಡವಾದರೆ, ಜನರ ರೋಗ ರುಜಿನವನ್ನು ಗುಣಪಡಿಸುವವರ್‍ಯಾರು ?"

"ಅದಕ್ಕೆಲ್ಲಾ ನಿನ್ನಂತಹವರಿದ್ದಾರಲ್ಲಾ. ಓದದೆ, ಓಡಾಡಿಕೊಂಡಿದ್ದು ಮೊದಲನೆಯ ವರ್ಷದಲ್ಲೇ ಡುಂಕಿ ಹೊಡೆಯುತ್ತಾ ಇರ್ತೀನಿ. ಕೊನೆಗೆ, ನಮ್ಮಪ್ಪನಿಗೇ ಬೇಸರವಾಗಿ ನನ್ನನ್ನು ಮೆಡಿಕಲ್ ಕಾಲೇಜಿನಿಂದ ಬಿಡುಗಡೆಮಾಡಿ ಬಿಡ್ತಾರೆ. ಅಲ್ಲಿಗೆ ನನ್ನಾಸೆ ನೆರವೇರುವುದು...."

ನುಡಿದಂತೆ ವಿಶ್ವ ನಡೆದುಕೊಳ್ಳಲಿಲ್ಲ. ಓದದೆ ಒಂದು ವರ್ಷವನ್ನು ವ್ಯರ್ಥವಾಗಿ ಹಾಳುಮಾಡಿಕೊಳ್ಳಲು ಅವನ ಅಂತರಂಗ ಒಪ್ಪಲಿಲ್ಲ.

* * * *

ಹುಡುಗಿಯರ ಗುಂಪೊಂದು ಗಲಾಟೆ ಎಬ್ಬಿಸುತ್ತಾ ಮುಂದೆ ಬರುತ್ತಿರುವು ದನ್ನು ಅನಂತು ಗಮನಿಸಿದ. ಅವರ ನಡುವೆ ಕುಂಟುತ್ತಾ ನಡೆದುಬರುತ್ತಿದ್ದ ಗಂಗಳನ್ನು ಗುರುತಿಸುವುದು ಅವನಿಗೆ ಕಷ್ಟವಾಗಲಿಲ್ಲ. ಮಾತು ನಿಲ್ಲಿಸಿ ಹುಡುಗಿಯರ ಗುಂಪಿನ ಕಡೆ ನೋಡುತ್ತಿದ್ದ ಸ್ನೇಹಿತನ ದೃಷ್ಟಿಯನ್ನ ಸುಸರಿಸಿ ನೋಡಿದ ವಿಶ್ವನ ಕಣ್ಣಿಗೂ ಗಂಗ ಕಾಣಿಸಿದಳು. ಅವಳುಟ್ಟ ಸೀರೆ ಸೂರ್ಯನ ಬಿಸಿಲಿಗೆ ಮತ್ತಷ್ಟು ಬಿಳುಪಾಗಿ ಕಾಣಿಸುತ್ತಿತ್ತು. ಅವಳು ಮುಂದಕ್ಕೆ ಹೆಜ್ಜೆ ಇಟ್ಟಂತೆಲ್ಲಾ ಸೀರೆಯ ನೆರಿಗೆಗಳು ಮುಂದಕ್ಕೆ ಚಿಮ್ಮುತ್ತಿದ್ದವು. ಹಿಮಾಲಯಪರ್ವತದಿಂದ ಚಿಮ್ಮುತ್ತಾ, ನೆಗೆಯುತ್ತಾ, ಹೊಳೆಯುತ್ತಾ, ಬಳುಕುತ್ತಾ ಇಳಿದು ಬರುವ ಗಂಗಾನದಿಯ ದೃಶ್ಯ ಗಂಗೆಯನ್ನು ನೋಡಿದ ವಿಶ್ವನ ಕಣ್ಣಿಗೆ ಕಟ್ಟಿದಂತಾಯಿತು.

"ಅನಂತು ಆ ಹುಡುಗಿಯ ಪರಿಚಯವನ್ನು ನನಗೆ ಮಾಡಿಕೊಡ್ತೀಯಾ ?"

"ಯಾವ ಹುಡುಗಿಯೊ? ಆ ಗುಂಪಿನಲ್ಲಿ ಹತ್ತು ಜನ ಹುಡುಗಿಯರಿದ್ದಾರೆ...."

"ಬಿಳಿಯ ಸೀರೆಯುಟ್ಟು ಬರುತ್ತಿರುವ ನಿನ್ನ ಸ್ನೇಹಿತೆ ಗಂಗ...."

"ಓಹೋ....ಧಾರಾಳವಾಗಿ ಮಾಡಿಕೊಡುತ್ತೇನೆ. ಆದರೆ ಆಕೆ ಮಿಕ್ಕ ಹುಡುಗಿಯರಂತಲ್ಲ ವಿಶ್ವ. ಹೆಚ್ಚು ಜನ ಸ್ನೇಹಿತರು, ಹೆಚ್ಚು ಮಾತು....ಒಂದೂ ಅವಳಿಗೆ ಬೇಕಿಲ್ಲ. ಓದಿನಲ್ಲಿ ಬಿಟ್ಟು ಬೇರೆ ಯಾವುದರಲ್ಲೂ ಅವಳಿಗೆ ಆಸಕ್ತಿಯಿಲ್ಲ...."

"ನಿನಗೆ ಅಸೂಯೆ ಇಲ್ಲದಿದ್ದರೆ ಆ ಹುಡುಗಿಯ ಪರಿಚಯವನ್ನು ನನಗೆ ಮಾಡಿಸು...."

"ಈ ವಿಷಯದಲ್ಲಿ ಅಸೂಯೆಯ ಪ್ರಶ್ನೆ ಎಲ್ಲಿ ಬರುತ್ತದೆ ವಿಶ್ವ ? ಗಂಗ ನನ್ನ ತಂಗಿಯಿದ್ದಂತೆ...."

ಅನಂತು ಮಾತು ಮುಗಿಯುವುದರಲ್ಲಿ ಆ ಹೆಣ್ಣು ಮಕ್ಕಳ ತಂಡ ಇವರ ಸಮೀಪದಲ್ಲಿ ನಿಂತುಕೊಂಡು ಹರಟುತ್ತಿತ್ತು....

"ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದ್ದೀಯಾ ಗಂಗ....?"

ತಲೆ ತಗ್ಗಿಸಿ ಯಾರ ಸಂಗಡವೂ ಮಾತಿಗೆ ಹೋಗದೆ ಮೌನವಾಗಿ ನಿಂತಿದ್ದ ಗಂಗಳನ್ನು ಅನಂತು ಮಾತಿಗೆಳೆದ. ಗಂಗ ಅನಂತುವಿನ ಧ್ವನಿ ಕೇಳಿ ತಲೆ ಎತ್ತಿದಳು.

"ಸುಮಾರಾಗಿ ಮಾಡಿದೀನಿ....ನೀನು ಚೆನ್ನಾಗಿಯೇ ಮಾಡಿರಬೇಕು...."

"ಇವನು ನನ್ನ ಸ್ನೇಹಿತ ವಿಶ್ವ....ನಮ್ಮೂರಿನ ಹುಡುಗ, ನಿನ್ನ ಸಹಪಾಠಿ. ಗಂಗ....ಮಂಡ್ಯದಲ್ಲಿದ್ದಾಗ ಇವರ ಮನೆಯ ಹಿಂದುಗಡೆಯಿದ್ದ ಮನೆಯಲ್ಲಿ ಹತ್ತು ವರ್ಷಗಳು ನಾವಿದ್ದೆವು...."

ವಿಶ್ವ ಕೈಜೋಡಿಸಿದ ಮೇಲೆ ಗಂಗ ತಲೆ ಎತ್ತಿ ನಮಸ್ಕರಿಸಿದಳು.

"ಇವತ್ತಿನ ಪ್ರಶ್ನಪತ್ರಿಕೆ ತುಂಬಾ ಕಠಿಣವಾಗಿತ್ತು ಅಲ್ಲವೆ ?"

ತಲೆ ತಗ್ಗಿಸಿ ನಿಂತಿದ್ದ ಗಂಗ ವಿಶ್ವನ ಮಾತಿಗೆ ಮತ್ತೆ ತಲೆ ಎತ್ತಬೇಕಾಯಿತು. ಹೃದಯದಲ್ಲಿ ಧೈರ್ಯ ತುಂಬಿ ದಿಟ್ಟತನದಿಂದ ಅವನನ್ನು ತಲೆ ಎತ್ತಿ ನೋಡಿದಳು.

ವಿಶ್ವನಾಥ ಒಳ್ಳೆಯ ಮೈಕಟ್ಟಿನ ಯುವಕ. ದಷ್ಟಪುಷ್ಟವಾಗಿ ಬೆಳೆದಿದ್ದ. ಎತ್ತರವಾದ ದೇಹಕ್ಕೆ ತಕ್ಕಂತೆ ಅವನು ಅಲಂಕರಿಸಿಕೊಳ್ಳುತ್ತಿದ್ದ. ಗೋಧಿ ಬಣ್ಣದ ಆರೋಗ್ಯ ಸೂಸುವಂತಹ ಅವನ ಮೈ ಬಣ್ಣ ಕಣ್ಣಿಗೆ ಹಿತವನ್ನುಂಟು ಮಾಡುತ್ತಿತ್ತು. ದಟ್ಟವಾದ ಕಪ್ಪು ಕೂದಲುಗಳು ಯಾವಾಗಲೂ ಒಟ್ಟಾಗಿ ಕುಳಿತುಕೊಳ್ಳದೆ ಮನಬಂದಂತೆ ಹಾರಾಡುತ್ತಿದ್ದವು. ತೆಳುವಾದ ಬಿಳಿಯ

ಮಲ್ಲಿನ ನಿಲುವಂಗಿಯ ಮರೆಯಲ್ಲಿದ್ದ ವಿಶಾಲವಾದ, ದಟ್ಟಪುಷ್ಟವಾದ ಅವನ ಎದೆಯನ್ನು ನೋಡಿದವರಿಗೆ ಮತ್ತೊಮ್ಮೆ ನೋಡಬೇಕೆನ್ನಿಸುತ್ತಿತ್ತು.

"ಪ್ರಶ್ನಪತ್ರಿಕೆ ಬಹಳ ಕಷ್ಟವೆಂದು ನನಗೆ ಅನ್ನಿಸಲಿಲ್ಲ...."

ಗಂಗ ನಿಧಾನವಾಗಿ ಉತ್ತರ ಕೊಟ್ಟಳು.

"ಓದದೆ ಅಡ್ಡಾಡಿಕೊಂಡಿದ್ದರೆ ಪ್ರಶ್ನೆಗಳು ಕಷ್ಟವಾಗಿ ಕಾಣುವುದರಲ್ಲಿ ಸೋಜಿಗವೇನು ?" ಅನಂತು ಬಿಚ್ಚಿಹೋಗಿದ್ದ ಷರಟಿನ ಗುಂಡಿಯನ್ನು ಹಾಕಿಕೊಳ್ಳುತ್ತಾ ಹೇಳಿದ.

"ಓದಬೇಕೆಂಬಾಸೆ....ಅದಕ್ಕಿಂತ ಮಿಗಿಲಾಗಿ ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕೆಂಬ ಆಸೆ ಖಂಡಿತ ನನಗಿಲ್ಲ...."

ವಿಶ್ವನಾಥನ ಮಾತು ಗಂಗೆಗೆ ಅನಿರೀಕ್ಷಿತವಾಗಿತ್ತು.

"ಓದದೆ ವ್ಯರ್ಥವಾಗಿ ಕಾಲ ಕಳೆಯುವ ವಿದ್ಯಾರ್ಥಿಗಳು ಅನೇಕರಿದ್ದಾರೆ. ಆದರೂ ತೇರ್ಗಡೆಯಾಗಿ ಮುಂದಿನ ತರಗತಿಗಳಿಗೆ ಹೋಗುವ ಅಪೇಕ್ಷೆ ಮಾತ್ರ ಎಲ್ಲಾ ವಿದ್ಯಾರ್ಥಿಗಳಿಗೂ ಇರುತ್ತದೆ. ನಿಮಗೆ ತೇರ್ಗಡೆಯಾಗುವ ಅಭಿಲಾಷೆಯೂ ಇಲ್ಲವೇ ?....ಆಶ್ಚರ್ಯ !"

ಗಂಗ ವಿಶ್ವನಾಥನ ಕಡೆ ನೋಡುತ್ತಾ ಹೇಳಿದಳು. ಆಗ ಅವನ ನಸು ನೀಳವಾದ ಮುಖದ ಮಧ್ಯದಲ್ಲಿ, ಅವನ ಪುಟ್ಟ ಮೂಗಿನ ಅಡಿಯಲ್ಲಿ, ನೊಣದಂತಿದ್ದ ಮೀಸೆ ಗಂಗಳಿಗೆ ಕಾಣಿಸಿತು.

ಗಂಗೆಗೆ ಅವನ ಮೀಸೆಯ ಬಗ್ಗೆ ಟೀಕೆ ಮಾಡೋಣವೆನಿಸಿದರೂ, ಪರಿಚಯವಾದ ದಿನವೇ ಅಷ್ಟೊಂದು ಸದರ ತೆಗೆದುಕೊಳ್ಳಬಾರದೆಂದು ತನ್ನ ಮನಸ್ಸಿಗೆ ಕಡಿವಾಣ ಹಾಕಿದಳು.

"ನನಗೆ ವೈದ್ಯನಾಗಬೇಕೆಂಬ ಆಸೆಯಿಲ್ಲ...."

"ಹೌದೇನು ? ಎಂಟು ವರ್ಷದಿಂದ ನಾನು ಮುಂದೆ ವೈದ್ಯಳಾಗಬೇಕೆಂದು ನಿರ್ಧರಿಸಿಕೊಂಡಿದ್ದೆ. ನನ್ನಾಸೆ ನೆರವೇರುವ ಕಾಲ ಈಗ ಒದಗಿ ಬಂದಿದೆ. ವೈದ್ಯಳಾಗಿ, ಜನಸೇವೆ ಮಾಡಬೇಕೆಂಬುದೇ ನನ್ನ ಜೀವನದ ಹೆಗ್ಗುರಿ. ಇದನ್ನುಳಿದು ಜೀವನದಲ್ಲಿ ನನಗೆ ಬೇರೆ ಯಾವ ಆಕಾಂಕ್ಷೆಯೂ ಇಲ್ಲ.

ಉದ್ವೇಗದಿಂದ ಮಾತನಾಡುತ್ತಿದ್ದ ಗಂಗೆಯನ್ನು ರೆಪ್ಪೆ ಮಿಟುಕಿಸದೇ ನೋಡುತ್ತಿದ್ದ ವಿಶ್ವ.

"ವೈದ್ಯಳಾಗುವುದೇ ನಿಮ್ಮ ಜೀವನದ ಗುರಿಯೇನು ?"

"ಹೌದು....ವೈದ್ಯಳಾಗಿ ನನ್ನಂತಹ ಅಂಗಹೀನರಿಗೆ ಕೈಲಾದ ಸೇವೆಯನ್ನು ಮಾಡಿ ನನ್ನ ಬದುಕನ್ನು ಸಾರ್ಥಕಪಡಿಸಿಕೊಳ್ಳೋಣ ಎಂದು...."

ಗಂಗಳಿಗೆ ಆ ಆಂಗ್ಲ ವೈದ್ಯರ ನೆನಪಾಯಿತು. ವೈದ್ಯಳಾಗಬೇಕೆಂಬ ಆಸೆಯನ್ನು ಅವರೇ ಅವಳ ಹೃದಯದ ತುಂಬ ತುಂಬಿದ್ದರು. ಅವರು ಅಂದು ನೆಟ್ಟ ಬೀಜ ಈಗ ಬೇರುಬಿಟ್ಟು, ಹಸಿರು ಎಲೆಗಳನ್ನು ಅರಳಿಸಿ ಫಲ ಕೊಡುವ ತಯಾರಿ ನಡೆಸಿತ್ತು.

"ಗಂಗ ನೀನು ಮೊದಲಿದ್ದಂತಿಲ್ಲ. ಬಹಳ ಬದಲಾಯಿಸಿಬಿಟ್ಟಿದ್ದೀಯಾ...."

ಅನಂತು ಮೌನವನ್ನು ಸೀಳಿಹಾಕಿ ಹೇಳಿದ.

"ಹೌದೇನು ?....ಏನೋ ನನ್ನ ಪುರಾಣ ಪ್ರಾರಂಭಿಸಿ ನಿಮಗೆಲ್ಲಾ ನಾನು ತುಂಬಾ ಬೇಸರಪಡಿಸಿರಬೇಕು....ಕ್ಷಮಿಸಿ...."

"ವಿಶ್ವನಿಗೆ ಮನಶ್ಶಾಸ್ತ್ರ ಓದಬೇಕೆಂಬ ಚಪಲ. ಅವನ ರೂಮಿನಲ್ಲಿರುವ ಪುಸ್ತಕಗಳೆಲ್ಲಾ ಮನಶ್ಶಾಸ್ತ್ರದ ಪುಸ್ತಕಗಳೇ ಆಗಿವೆ. ಇವನ ತಂದೆ ಹಾಸನದಲ್ಲಿ ಸುಪ್ರಸಿದ್ಧ ವೈದ್ಯರಾಗಿದ್ದಾರೆ. ತಮ್ಮಂತೆ ಮಗನೂ ವೈದ್ಯನಾಗಲಿ ಎನ್ನುವ ಚಪಲ ಅವರಿಗೆ....ಇವನಿಗೆ ನಿರಾಶೆಯಾದರೂ ಅವರ ಹಠವೇ ಗೆದ್ದಿತು...."

ಅನಂತು ವಿಶ್ವನ ಸಂಕಟವನ್ನು ಗಂಗೆಯ ಮುಂದಿಟ್ಟು ವಿವರಿಸಿದ.

"ವೈದ್ಯನಾಗಿ ಜನಸೇವೆಮಾಡುವ ಆಸೆ ನಿಮಗಿಲ್ಲವೆ ?"

"ಇದೆ....ಆದರೂ...." ವಿಶ್ವ ತೊದಲಿದ.

'ಮದುವೆಯಾಗಿ, ಮಡದಿಯಾಗಿ, ಮಮತೆಯ ತಾಯಿಯಾಗಿ ಬಾಳಬೇಕಾದ ಯುವತಿಯೊಬ್ಬಳು ವೈದ್ಯಳಾಗಿ ಜನಸೇವೆ ಮಾಡುವುದರಿಂದ ಜೀವನದಲ್ಲಿ ಗುರಿಯನ್ನು ಮುಟ್ಟುತ್ತೇನೆ ಎಂದು ಹೇಳುತ್ತಿರುವಾಗ, ಅಂತಹವಳ ಮುಂದೆ 'ಇಲ್ಲ....ಈ ವೈದ್ಯಕೀಯ ನನಗೆ ಬೇಕಿಲ್ಲ' ಎಂದು ಹೇಳುವುದೆ ?'

'ಕಟುವಾಗಿ ಸತ್ಯ ಸಂಗತಿಯನ್ನು ಹೇಳುವುದರಿಂದ ಈಕೆಯ ಮನಸ್ಸು ನೋಯುವುದಿಲ್ಲವೆ ?'

'ಈಕೆ ಏನಾದರೂ ತಿಳಿದುಕೊಳ್ಳಲಿ. ಅದರಿಂದ ನನಗೆ ಆಗಬೇಕಾದುದಾದರೂ ಏನು ? ನನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿಬಿಡುತ್ತೇನೆ....' ವಿಶ್ವನಾಥನ ಮನಸ್ಸಿನಲ್ಲಿ ಎರಡು ವಿಧವಾದ ವಿರೋಧ ಸಲಹೆಗಳೆದ್ದು ಅವನ ಮಾತನ್ನು ತೊದಲುವಂತೆ ಮಾಡಿದವು.

"ಮನಸ್ಸಿಟ್ಟು ಓದಿ ವಿಶ್ವನಾಥ್. ಖಂಡಿತವಾಗಿ ವೈದ್ಯಕೀಯದಲ್ಲಿ ನಿಮಗೆ ಆಸಕ್ತಿ ಹುಟ್ಟುವುದು. ದೇವರು ನಿಮಗೆ ಕೊಟ್ಟಿರುವ ಬುದ್ಧಿಶಕ್ತಿಯನ್ನು

ಉಪಯೋಗಿಸದೆ ನಿಮ್ಮ ಮುಂದಿರುವ ಉಜ್ವಲವಾದ ಭವಿಷ್ಯವನ್ನು ತೆಗೆದೊಗೆಯ ಬೇಡಿ. ನೀವು ಓದಿನಲ್ಲಿ ಆಸಕ್ತಿಯಿಡುತ್ತೇನೆಂದು ನನಗೆ ಭರವಸೆ ಕೊಡಿ...."

ಗಂಗ ಎಚ್ಚರವಿಲ್ಲದವಳಂತೆ ಮಾತನಾಡಿದಳು. ದೊಡ್ಡ ವೇದಾಂತಿಯಂತೆ ಹೆಚ್ಚು ಪರಿಚಯವಿಲ್ಲದ ಹುಡುಗನೊಬ್ಬನಿಗೆ, ತನಗಿಂತ ವಯಸ್ಸಿನಲ್ಲಿ ಹಿರಿಯ ನಾದ ಸಹಪಾಠಿಯೊಬ್ಬನಿಗೆ ವಿವೇಕ ಹೇಳಿದಳು.

ಮಾತು ಮುಗಿಸಿದ ಮೇಲೆ ಆ ಹುಡುಗ ತನ್ನನ್ನು 'ಅಧಿಕ ಪ್ರಸಂಗಿ' ಎಂದು ಕೊಳ್ಳುವನೇನೋ ಎಂದು ಗಂಗ ಚಿಂತಿಸಿದಳು. ವೈದ್ಯಶಾಸ್ತ್ರಕ್ಕಾಗಿ ತನ್ನ ತನು, ಮನವನ್ನೆಲ್ಲಾ ಅರ್ಪಣೆಮಾಡಿದ್ದ ಗಂಗೆಗೆ ಅವನ ಅಲಕ್ಷ, ನಿರಾಸಕ್ತಿ ಕಂಡು ಸಹಿಸಲಸಾಧ್ಯವಾಯಿತು.

"ನೀನು ಚಿಕ್ಕವಳಾಗಿದ್ದಾಗ ಮಾತನಾಡಿಸಿದರೆ ಓಡಿ ಹೋಗ್ತಾ ಇದ್ದೆ.... ಈಗ ಸ್ವಾರಸ್ಯವಾದ ಭಾಷಣಗಳನ್ನೇ ಮುಂದಿಡುತ್ತೀಯಲ್ಲಾ ಗಂಗ...."

ಅನಂತು ಗಂಗಳ ಗಂಭೀರವಾದ ಮುಖವನ್ನು ನೋಡುತ್ತಾ ಹೇಳಿದ.

"ಚಿಕ್ಕವಳಾಗಿದ್ದಾಗ ಓಡಿ ಹೋಗ್ತಾ ಇದ್ನೇನು ? ತೆವಳಿಕೊಂಡು ಹೋಗ್ತಾ ಇದ್ದೆ ಅಲ್ವೆ ಅನಂತು ?"

ವಿಶ್ವನಾಥನ ತಲೆಯ ಮೇಲ್ಭಾಗದಲ್ಲಿ ಕಾಣಿಸುತ್ತಿದ್ದ ಗಿಡದ ರೆಂಬೆಯಲ್ಲೇ ದೃಷ್ಟಿಯಿಟ್ಟು ಗಂಗ ಉತ್ತರಕೊಟ್ಟಳು. ನಿರ್ವಿಕಾರಭಾವದಿಂದಾಡಿದ್ದರೂ, ಅವಳ ಹೃದಯದ ವೇದನೆಯನ್ನು ಅನಂತು, ವಿಶ್ವ ಇಬ್ಬರೂ ಚೆನ್ನಾಗಿ ಅರ್ಥಮಾಡಿ ಕೊಂಡರು.

"ಇಷ್ಟು ಚಿಕ್ಕವಯಸ್ಸಿನ ಹುಡುಗಿಗೆ ಎಷ್ಟೊಂದು ವೈರಾಗ್ಯ ?" ಎಂದು ಕೊಂಡ ವಿಶ್ವ. ಅವನ ಹೃದಯ ಅನುಕಂಪದಿಂದ ಮಿಡಿಯಿತು.

"ಮಂಡ್ಯಕ್ಕೆ ನಾಳೆಯೇ ಹೊರಟುಬಿಡ್ತೀಯಾ ಗಂಗ ? ಅಮ್ಮನ್ನ ನೋಡಿ ಎಷ್ಟೋ ದಿವಸಗಳಾಗಿ ಹೋಯಿತು ಅಲ್ಲವೆ ?"

ಅನಂತು ಬೇರೆ ವಿಷಯ ತೆಗೆದು ಅವಳ ಮನಸ್ಸನ್ನು ತಿರುಗಿಸಲು ಪ್ರಯತ್ನಿಸಿದ.

"ಓಹೋ....ಪರೀಕ್ಷೆ ಮುಗಿದ ಮೇಲೆ ನನಗೆ ಮೈಸೂರಿನಲ್ಲಿ ಏನು ಕೆಲಸ ? ನಳಿನೀನೂ ಮಗನ ಸಂಗಡ ಮಂಡ್ಯಕ್ಕೆ ಬಂದಿದ್ದಾಳಂತೆ. ಮಧುಕರ ಇದ್ದು ಬಿಟ್ಟರೆ ನನಗೆ ಬೇಸಿಗೆ ರಜಾ ದಿನಗಳನ್ನು ಹೇಗೆ ಕಳೆಯಬೇಕೆಂಬ ಯೋಚನೆಯೇ ಇಲ್ಲ...."

"ಮಕ್ಕಳನ್ನು ಕಂಡರೆ ನಿಮಗೆ ಅಷ್ಟೊಂದು ಆಸೆಯೇನು ?"

"ಮುದ್ದು ಮಕ್ಕಳನ್ನು ಕಂಡರೆ ಯಾರಿಗೆ ಆಸೆಯಿರುವುದಿಲ್ಲ ? ಮಕ್ಕಳು ನನ್ನ ಮುಂದಿದ್ದು ಬಿಟ್ಟರೆ ನನಗೆ ಪ್ರಪಂಚವೇ ಬೇಡ...."

ಗಂಗಳ ಕಣ್ಣುಗಳು ಸಂತೋಷದಿಂದ ಹೊಳೆಯುತ್ತಿದ್ದವು. ಅವಳ ಮನಸ್ಸು ಮುದ್ದು ಮಧುಕರನನ್ನು ನೆನೆಯುತ್ತಿತ್ತು.

"ಮ....ಧು....ಕ....ರ, ಹೆಸರು ತುಂಬಾ ಮುದ್ದಾಗಿದೆ...." ನಾಲಿಗೆಯ ಮೇಲಿರುವ ಮಧುವನ್ನು ಚಪ್ಪರಿಸುವಂತೆ ವಿಶ್ವ ಆ ಹೆಸರನ್ನು ಚಪ್ಪರಿಸಿದ.

"ಮಗು ಹೆಸರಿಗಿಂತ ಮುದ್ದಾಗಿದೆ. ನೀವುಗಳೆಲ್ಲಾ ಮಂಡ್ಯ ಬಿಟ್ಟು ಮೂರು ವರ್ಷಗಳ ಮೇಲಾಗಿರಬೇಕು, ಅಲ್ಲವೇ ಅನಂತು ?"

"ಹೌದು...."

"ನಾಳೆ ನನ್ನ ಸಂಗಡ ನೀನು ಮಂಡ್ಯಕ್ಕೆ ಖಂಡಿತವಾಗಿ ಬಾ ಅನಂತು. ನೀನೂ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದೀಯೆ ಎಂದು ಅಮ್ಮನಿಗೆ ನಾನು ಕಾಗದ ಬರೆದಿದ್ದೆ. ಈ ಬೇಸಿಗೆಯಲ್ಲಿ ಖಂಡಿತವಾಗಿ ನಿನ್ನನ್ನು ಕರೆದು ಕೊಂಡು ಬಾ ಎಂದು ಬರೆದಿದ್ದಾರೆ...."

"ನಾಳೆ ನಾನು, ವಿಶ್ವ ಹಾಸನಕ್ಕೆ ಹೊರಟಿದ್ದೇವೆ."

ಅನಂತು ಮಾತು ಕೇಳಿ ಗಂಗ ನಿರುತ್ತರಳಾದಳು.

ಅನಂತು ಸಂಗಡ ಮಂಡ್ಯಕ್ಕೆ ಬರುವಂತೆ ತಾನು ವಿಶ್ವನಾಥನನ್ನೂ ಆಹ್ವಾನಿಸುವುದೆ ? ಕರೆದ ಮಾತ್ರಕ್ಕೆ ಅವನು ಬರುತ್ತಾನೇನು ? ಎಂದಿಗೂ ಇಲ್ಲ.... ಒಂದುಪಕ್ಷ ಬಂದರೆ ? ಅಣ್ಣ, ಅಮ್ಮ ನನ್ನ ವಿಷಯದಲ್ಲಿ ತಪ್ಪು ತಿಳಿದು ಕೊಂಡರೆ ?....

ಗಂಗ ಸಿಕ್ಕಿಬಿದ್ದ ಪ್ರಸಂಗದಿಂದ ಪಾರಾಗಲು ಪ್ರಯತ್ನಿಸಿದಳು. ಕೊನೆಗೆ ವಿಶ್ವನಾಥನನ್ನೂ ತಮ್ಮೂರಿಗೆ ಬರುವಂತೆ ಕರೆಯುವುದೆಂದು ನಿರ್ಧರಿಸಿಕೊಂಡಳು.

"ನೀವು ಮಂಡ್ಯವನ್ನು ನೋಡಿದ್ದೀರಾ ?"

"ಇಲ್ಲ. ನಿಮ್ಮೂರಿನಲ್ಲಿ ನೋಡಬೇಕಾದುದು ತಾನೆ ಏನಿದೆ ?"

"ಸಕ್ಕರೆ ಕಾರ್ಖಾನೆಯನ್ನು ನೋಡಬಹುದು....ನೀವೂ ಮಂಡ್ಯಕ್ಕೆ ಬನ್ನಿ."

"ಆ ಕಾರ್ಖಾನೆಯಲ್ಲಿ ನಮಗೆ ತಿನ್ನಲು ಬೇಕಾದಷ್ಟು ಸಕ್ಕರೆಯನ್ನು ಕೊಡುತ್ತಾರೋ ?"

"ಓಹೋ....ಒಂದು ಮೂಟೆ ಸಕ್ಕರೆಯನ್ನಾದರೂ ನೀವು ಅಲ್ಲಿ ತಿನ್ನಬಹುದು. ಆದರೆ ಒಂದು ಹಿಡಿ ಸಕ್ಕರೆಯನ್ನೂ ನೀವು ಕಾರ್ಖಾನೆಯಿಂದ ಹೊರಗೆ ತೆಗೆದುಕೊಂಡು ಹೋಗಕೂಡದು...."

"ಹೊಟ್ಟೆತುಂಬ ಸಕ್ಕರೆ ಸಿಗುವಹಾಗಿದ್ದರೆ ನಾನು ನಿಮ್ಮೂರಿಗೆ ಬರುತ್ತೇನೆ...."

"ಸಿಹಿ ಎಂದರೆ ನಿಮಗೆ ತುಂಬಾ ಇಷ್ಟವೇನು ?"

"ವಿಶ್ವನಿಗೆ ಸಕ್ಕರೆಯೇ ಸಿಹಿಯಲ್ಲ. ಆಗಲಿ, ನಾವಿಬ್ಬರೂ ನಾಳೆ ಮಂಡ್ಯಕ್ಕೆ ಬರ್ತೀವಿ. ನಾಡಿದ್ದು ಅಲ್ಲಿಂದ ನಮ್ಮೂರಿಗೆ ಹೊರಟು ಬಿಡ್ತೀವಿ." ಎಂದು ಗೆಳೆಯನಿಗೆ ಬದಲಾಗಿ ತಾನೇ ಗಂಗಳ ಪ್ರಶ್ನೆಗೆ ಉತ್ತರಿಸಿದ ಅನಂತು.

* * * *

ವಿಶಾಲವಾದ ಬಯಲಿನ ಮಧ್ಯಭಾಗದಲ್ಲಿ ಎದ್ದು ಕಾಣಿಸುತ್ತಿದ್ದ ದೊಡ್ಡ ಕಲ್ಲಿನ ಕಟ್ಟಡವನ್ನು ನೋಡಿ ರೈಲಿನ ಕಿಟಕಿಯ ಹೊರಗೆ ತಲೆಹಾಕಿ ನೋಡುತ್ತಿದ್ದ ವಿಶ್ವ ಗಂಗಳ ಕಡೆ ತಿರುಗಿ ಪ್ರಶ್ನೆಮಾಡಿದ.

"ಆ ಕಟ್ಟಡ ಯಾವುದು ?"

"ನಮ್ಮೂರಿನ ನ್ಯಾಯಾಸ್ಥಾನದ ಕಟ್ಟಡ....ಓ....ಆಗಲೆ ಮಂಡ್ಯ ಬಂದು ಬಿಡ್ತು !"

ಗಂಗ ಸಂಭ್ರಮದಿಂದ ಕಿಟಕಿಯ ಕಡೆ ಮುಖ ಮಾಡಿ ಕುಳಿತುಕೊಂಡಳು.

ರೈಲು ನಿಂತಕೂಡಲೆ ಅನಂತು ರೈಲಿನಿಂದ ಕೆಳಕ್ಕೆ ಧುಮುಕಿದ. ಬಾಗಿಲ ಬಳಿ ನಿಂತಿದ್ದ ವಿಶ್ವ ಕೈಯೊಳಗಿದ್ದ ಸಿಗರೇಟಿನ ತುಂಡನ್ನು ನೆಲಕ್ಕೆಸೆದು ಕೆಳಕ್ಕಿಳಿದು, ಉರಿಕಾರುತ್ತಿದ್ದ ಸಿಗರೇಟಿನ ಮುಂತಿಯನ್ನು ಬೂಡ್ಸ್ ಕಾಲಿನಿಂದ ಉಜ್ಜಿ ಆರಿಸಿದ.

ಮೆಟ್ಟಿಲಿಳಿಯುತ್ತಿದ್ದ ಗಂಗಳ ಕಾಲಿಗೆ ಸೀರೆಯ ನೆರಿಗೆಗಳು ತೊಡರಿ, ಅವಳಿಗೆ ಮುಗ್ಗರಿಸಿ ಬೀಳುವಂತಾಯಿತು. ಸಮೀಪದಲ್ಲಿ ನಿಂತಿದ್ದ ವಿಶ್ವ ಬೀಳುತ್ತಿದ್ದ ಗಂಗೆಯ ತೋಳನ್ನು ಭದ್ರವಾಗಿ ಹಿಡಿದುಕೊಂಡು ಅವಳು ಬೀಳದಂತೆ ತಡೆದು ನಿಲ್ಲಿಸಿದ. ವಿಶ್ವನ ತೋಳು ಬಲದ ಆಸರೆಯಲ್ಲಿ ರೈಲಿನಿಂದ ಗಂಗ ಕೆಳಕ್ಕಿಳಿದಳು. ವಿಶ್ವನ ಸ್ಪರ್ಶ ಹಾಗೂ ಅವನ ಕೈ ಬೆರಳುಗಳ ಬಿಗಿತದಿಂದ ಅವಳ ದೇಹ ಕಂಪಿಸುತ್ತಿತ್ತು. ಕೂದಲುಗಳ ಮರೆಯಲ್ಲಿದ್ದ ಅವಳ ಕಿವಿಗಳೆರಡೂ ಕೆಂಪಾಗಿದ್ದವು. ಗಂಗ ನೆಲದ ಮೇಲೆ ಸ್ಥಿರವಾಗಿ ನಿಂತಕೂಡಲೆ ವಿಶ್ವ ಗಂಗಳ ತೋಳನ್ನು ಹಿಡಿದಿದ್ದ ತನ್ನ ಕೈಯನ್ನು ಹಿಂದಕ್ಕೆ ತೆಗೆದುಕೊಂಡ.

"ಹುಷಾರಾಗಿದೀಯ ಗಂಗ....?"

ಅವಸರದಲ್ಲಿ ನಡೆದುಬರುತ್ತಿದ್ದ ಮಾಧವ ಮಗಳನ್ನು ಸಮೀಪಿಸಿದ. ಮಗಳ

ಅಕ್ಕಪಕ್ಕದಲ್ಲಿ ನಿಂತು ಮಾತನಾಡುತ್ತಿದ್ದ ಇಬ್ಬರು ಅಪರಿಚಿತ ಯುವಕರನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು.

"ನಮ್ಮ ಮನೆ ಹಿಂದುಗಡೆ ವಾಸವಾಗಿದ್ದ ಶಿವನಂಜಪ್ಪನವರ ಮಗ ಅನಂತು....ಅವನು ಗುರುತು ಸಿಕ್ಕದಂತೆ ಬೆಳೆದುಬಿಟ್ಟಿದಾನೆ....ಅಲ್ಲವೆ ಅಣ್ಣ ?"

ಪರಿಚಿತನಾಗಿದ್ದರೂ ಅಪರಿಚಿತನಂತೆ ಕಂಡ ಅನಂತುವಿನ ಪರಿಚಯವನ್ನು ಗಂಗ ತಂದೆಗೆ ಮಾಡಿಸಿಕೊಟ್ಟಳು.

"ಏನು....ಅನಂತೂನೆ ? ಎಷ್ಟು ಎತ್ತರವಾಗಿ ಬೆಳೆದುಬಿಟ್ಟಿದ್ದೀಯಾ ? ಗಂಗ ಹೇಳದೆ ಇದ್ದಿದ್ದರೆ ಖಂಡಿತವಾಗಿ ನಾನು ನಿನ್ನನ್ನು ಗುರುತಿಸುತ್ತಿರಲಿಲ್ಲ...."

"ಇವರು ಹಾಸನದಲ್ಲಿ ವೈದ್ಯರಾಗಿರುವ ವೆಂಕಟರಾಮಯ್ಯನವರ ಮಗ ವಿಶ್ವನಾಥ, ನನ್ನ ಸಹಪಾಠಿ. ಇವರು ನಮ್ಮ ತಂದೆ...."

ಮಾಧವನ ಮುಖದ ತುಂಬಾ ಇದ್ದ ಪ್ರಶ್ನಾರ್ಥಕ ಚಿಹ್ನೆ ಮಾಯವಾಗಿ, ಅದಕ್ಕೆ ಬದಲು ಮುಖದ ತುಂಬಾ ಮಂದಹಾಸ ಕಾಣಿಸಿಕೊಂಡಿತು. ವಿಶ್ವನಾಥನ ಕೈ ಕುಲುಕಿದ ಮೇಲೆ ಮಾಧವ ವಾತ್ಸಲ್ಯದಿಂದ ಅನಂತುವಿನ ಬೆನ್ನು ತಟ್ಟಿದ.

"ಗಂಗ....ಯಾಕೋ ನೀನು ಬಡವಾಗಿರುವ ಹಾಗೆ ಕಾಣುತ್ತೀ...."

ಗಂಗ ಗಾಡಿಯಿಂದಿಳಿದ ಕೂಡಲೆ ಮಗಳನ್ನು ನೋಡಲು ಧಾವಿಸಿ ಬಂದಿದ್ದ ಕುಮುದ ಕೇಳಿದಳು. ತಾಯಿಯ ಪ್ರಶ್ನೆಗೆ ಗಂಗ ನಗುತ್ತಾ ಹೇಳಿದಳು.

"ನಿನ್ನ ಕಣ್ಣಿಗೆ ನಾನು ಯಾವಾಗಲೂ ಬಡವಾಗಿರುವ ಹಾಗೆ ಕಾಣಿಸುತ್ತೇನೆ ಅಮ್ಮ. ಪರೀಕ್ಷೆಗೆ ಸ್ವಲ್ಪ ನಿದ್ರೆಕೆಟ್ಟು ಓದಿರುವುದರಿಂದ ಹಾಗಾಗಿರಬಹುದು ಅಷ್ಟೆ...."

ತಾಯಿಯ ಮನಸ್ಸಿಗೆ ಸ್ವಲ್ಪ ಸಮಾಧಾನ ತಂದುಕೊಡಲು ಗಂಗ ಪ್ರಯತ್ನಿಸಿದಳು.

"ಅಜ್ಜಿ....ಅಪ್ಪಜ್ಜಿ...."

ಮಧುಕರ ತಿಂಡಿಗಾಗಿ ಅಜ್ಜಿಯನ್ನು ಅಂಗಲಾಚಿದ.

"ಅರೆ ! ಮಧು ! ಬಾ ಮರಿ, ಎಷ್ಟು ಎತ್ತರವಾಗಿ ಬೆಳೆದುಬಿಟ್ಟಿದ್ದೀಯೊ ?"

ಗಂಗ ಮಧುಕರನನ್ನು ಬರಸೆಳೆದು ಅಪ್ಪಿಕೊಂಡು ಅವನ ಕತ್ತಿನ ಮೇಲೆ, ಮುಖದ ಮೇಲೆಲ್ಲಾ ಮುತ್ತಿನ ಮಳೆಗರೆದಳು.

ಆ ದೃಶ್ಯವನ್ನು ನೋಡುತ್ತಾ ನಿಂತಿದ್ದ ವಿಶ್ವ ಗಂಗಳನ್ನು ಕೇಳಿದ.

"ನಿಮಗೆ ಮಕ್ಕಳೆಂದರೆ ಎಷ್ಟೊಂದು ಆಸೆ !"

ಗಂಗ ಅವನಿಗೆ ನಗುವಿನ ಉತ್ತರ ಕೊಟ್ಟು ಅಳುತ್ತಿದ್ದ ಮಧುಕರನನ್ನು ತೃಪ್ತಿಯಾಗುವವರೆಗೂ ಮುದ್ದಿಸಿದಳು.

ಮಗನ ಅಳು ಕೇಳಿ ನಳಿನಿ ಧಾವಿಸಿ ಬಂದಳು. ತಂಗಿಯ ತೋಳಿನಲ್ಲಿ ಬಿಕ್ಕಿ ಬಿಕ್ಕಿ ಅಳುತ್ತಿದ್ದ ಮಗನನ್ನು ನಳಿನಿ ಎತ್ತಿಕೊಂಡು ಸಮಾಧಾನಪಡಿಸಿದಳು.

"ಗಂಗ ಹದಿಮೂರು ಹದಿನಾಲ್ಕು ವರ್ಷದ ಹುಡುಗಿಯಾಗಿದ್ದರೂ ಬೊಂಬೆಗಳನ್ನು ಇಟ್ಟುಕೊಂಡು ಮನೆಯಾಟ ಆಡುತ್ತಿದ್ದಳು."

ಕುಮುದಳ ಮಾತು ಕೇಳಿ ಅನಂತು, ವಿಶ್ವ ಇಬ್ಬರೂ ತೃಪ್ತಿಯಾಗುವವರೆಗೂ ನಕ್ಕರು.

"ಏನಮ್ಮ, ನೀನು ಸುಳ್ಳು ಹೇಳ್ತಾ ಇದೀಯಾ ?"

ಗಂಗ ಕೆನ್ನೆಯುಬ್ಬಿಸಿ ಹುಸಿಮುನಿಸಿನಿಂದ ತಾಯಿಯನ್ನು ನೋಡಿದಳು.

'ಕೋಪದಲ್ಲಿದ್ದಾಗ ಸಹ ಈ ಹುಡುಗಿ ಎಷ್ಟು ಚೆಲುವೆಯಾಗಿ ಕಾಣಿಸುತ್ತಾಳೆ !' ಎಂದುಕೊಂಡ ವಿಶ್ವ ತನ್ನೆರಡು ಕಣ್ಣುಗಳಿಂದ ಆ ಸೌಂದರ್ಯವನ್ನು ಹೀರಿದ.

"ನಾನು ಸುಳ್ಳು ಹೇಳ್ತೀನೇನು ? ಅನಂತು, ಅವಳ ರೂಮಿಗೆ ಹೋಗಿ ನೋಡಿದರೆ ನಿನಗೇ ಗೊತ್ತಾಗುತ್ತದೆ. ಅವಳ ಬೀರುವಿನಲ್ಲಿ, ಮೇಜಿನ ಮೇಲೆ, ಗೋಡೆಗಳ ಮೂಲೆಗಳಲ್ಲಿ....ಎಲ್ಲೆಲ್ಲಿ ನೋಡಿದರೂ....ಎತ್ತ ಕತ್ತು ಹೊರಳಿಸಿದರೂ ಬೊಂಬೆಗಳೇ...."

"ಅನಂತೂ....ನಿನ್ನ ದಮ್ಮಯ್ಯ....ನನ್ನ ರೂಮಿಗೆ ಮಾತ್ರ ಹೋಗಬೇಡಪ್ಪ...."

ಗಂಗ ಅನಂತುವಿನ ಕಡೆ ತಿರುಗಿ ದೈನ್ಯದಿಂದ ಅಂಗಲಾಚಿದಳು. ಅವಳ ಸ್ಥಿತಿ ಮಾಲಿನ ಸಮೇತ ಸಿಕ್ಕಿಬಿದ್ದ ಕಳ್ಳಿಯಂತಾಗಿತ್ತು.

ಮಾಧವ, ವಿಶ್ವ, ಅನಂತು ಮೂವರೂ ಸಕ್ಕರೆ ಕಾರ್ಖಾನೆ ನೋಡಲು ಹೋಗುವುದೆಂದು ನಿಶ್ಚಯಿಸಿದರು.

"ಗಂಗ....ನೀವು ಬರೋದಿಲ್ವೇನು....?" ವಿಶ್ವ ಗಂಗಳನ್ನು ಕೇಳಿದ.

"ಅಲ್ಲಿ ಮೆಟ್ಟಲುಗಳನ್ನು ಹತ್ತಿ ಹತ್ತಿ ಮೇಲಕ್ಕೆ ಹೋಗಿ ನೋಡಬೇಕಂತೆ....ನನ್ನಿಂದ ಸಾಧ್ಯವಾಗುವುದಿಲ್ಲ...."

"ಹಾಗಾದರೆ ಮಂಡ್ಯದಲ್ಲಿ ಹುಟ್ಟಿ, ಬೆಳೆದು, ಅನೇಕ ವರ್ಷಗಳಿಂದ ವಾಸವಾಗಿದ್ದುಕೊಂಡೂ ನೀವೂ ಸಕ್ಕರೆ ಕಾರ್ಖಾನೆಯನ್ನು ನೋಡಿಲ್ಲವೆ ? ಖಂಡಿತ

ಾಗಿ ನೀವು ನಮ್ಮ ಸಂಗಡ ಬರಬೇಕು. ನಿಮ್ಮೂರಿನ ಕಾರ್ಖಾನೆಯನ್ನು ನನಗೆ ೕವು ತೋರಿಸುವುದಿಲ್ಲವೆ?"

"ಕಾರ್ಖಾನೆಯನ್ನು ನಿಮಗೆ ತೋರಿಸಲು ನಮ್ಮ ತಂದೆ ಬರುತ್ತಾರೆ...."

"ನಿಮ್ಮ ತಂದೆ ಬಂದರೆ ನೀವು ಬಂದ ಹಾಗಾಯಿತೇನು?"

ವಿಶ್ವ ಗಂಗಳ ಹಣೆಯ ಮೇಲಾಡುತ್ತಿದ್ದ ಮುಂಗುರುಳನ್ನೇ ನೋಡುತ್ತಾ ೕಳಿದ. ಮುದ್ದಾದ ಮಗುವಿನಂತಿದ್ದ ಅವಳ ಮುಗ್ಧ ಮುಖವನ್ನೇ ನೋಡುತ್ತಾ ್ಮೈ ಮರೆತ ವಿಶ್ವನನ್ನು ಹಿಂದಿನಿಂದ ಬಂದ ಅನಂತು ಎಚ್ಚರಿಸಿದ.

"ಆಗಲಿ....ನಾನೂ ಬರೀನಿ...."

ಗಾಡಿಗಟ್ಟಲೆ ಯಂತ್ರದ ಬಾಯಿಗೆ ಬಂದು ಬೀಳುತ್ತಿದ್ದ ಕಬ್ಬನ್ನು ನೋಡಿದ ೂಡಲೆ ವಿಶ್ವನ ಬಾಯಿಯಲ್ಲಿ ನೀರೂರಿತು. ಕೈಗೆ ಸಿಕ್ಕಿದ ಒಂದು ಕಬ್ಬಿನ ುಂಡನ್ನು ಅವನು ತೆಗೆದುಕೊಂಡು ಸಿಗಿದು ತಿನ್ನಲು ಪ್ರಾರಂಭಿಸಿದ.

"ಕಬ್ಬು ಎಷ್ಟು ಸಿಹಿಯಾಗಿದೆ...."

ಕಬ್ಬಿನ ಸಿಹಿರಸವನ್ನು ಹೀರುತ್ತಾ ವಿಶ್ವನಾಥ ಅದರ ಸವಿಯ ಬಗ್ಗೆ ಪ್ರಶಂಸೆ ಾಡಿದ. ಎಳೆಯ ಬಾಲಕನಂತೆ ಎಲ್ಲರೆದುರಿನಲ್ಲಿ ಸ್ವಲ್ಪವೂ ಸಂಕೋಚವಿಲ್ಲದೆ ಬ್ಬು ಸಿಗಿಯುತ್ತಿದ್ದ ವಿಶ್ವನನ್ನು ನೋಡಿ ಗಂಗ ಮನಸ್ಸಿನಲ್ಲೇ ನಕ್ಕಳು.

"ಶುದ್ಧ ಎಳೆ ನಿಂಬೆಕಾಯಿ ಕಣೊ ನೀನು....ವಿಶ್ವ...."

ಅನಂತು ಮಾತಿಗೆ ವಿಶ್ವ ಉತ್ತರ ಕೊಡಲಿಲ್ಲ. ಮಾತು ಹೊರಡಿಸಲು ಕಬ್ಬು ಿಗಿಯುತ್ತಿದ್ದ ಅವನ ಬಾಯಿಗೆ ಬಿಡುವಿರಲಿಲ್ಲ.

ಬೃಹದಾಕಾರದ ಕಬ್ಬಿಣದ ಮೊರಗಳಿಂದ ಸುರಿಯುತ್ತಿದ್ದ ಸಕ್ಕರೆಯನ್ನು ೋಡಿದ ಕೂಡಲೆ ವಿಶ್ವ ಆಶ್ಚರ್ಯದಿಂದ ಉದ್ಗರಿಸಿದ. ಅವನ ಕೈಯೊಳಗಿದ್ದ ಬ್ಬಿನ ತುಂಡು ಕೆಳಗುರುಳಿತು.

"ಅಬ್ಬಾ!....ಎಷ್ಟೊಂದು ಸಕ್ಕರೆ!"

ರೂಮಿನ ತುಂಬ ಹರಡಿರುವ ಬಣ್ಣಬಣ್ಣದ ಆಟದ ಸಾಮಾನುಗಳು, ೊಂಬೆಗಳನ್ನು ನೋಡಿ ಸಂಭ್ರಮಪಡುವ ಎಳೆಯ ಬಾಲಕನಂತೆ ಆ ರಾಶಿ ಕ್ಕರೆಯನ್ನು ನೋಡಿದ ವಿಶ್ವನ ಸಂತೋಷಕ್ಕೆ ಮಿತಿಇಲ್ಲದಂತಾಯಿತು. ವಿಶ್ವನನ್ನೇ ೋಡುತ್ತಾ ನಿಂತ ಗಂಗೆಗೆ ಅವನ ಮಗುವಿನಂತಹ ಸ್ವಭಾವ ಮೆಚ್ಚುಗೆ ಾಯಿತು.

"ಸಕ್ಕರೆಯನ್ನು ತಿಂದುನೋಡಿ ಸ್ವಾಮಿ...."

ಸಕ್ಕರೆಯ ರಾಶಿಯ ಪಕ್ಕದಲ್ಲಿ ನಿಂತಿದ್ದ ಕೆಲಸಗಾರನೊಬ್ಬ ಹಿಡಿಸಕ್ಕರೆ

ಯನ್ನು ಮಾಧವನ ಕಡೆ ನೀಡಿದ. ಮಾಧವನಿಗೆ ಬದಲು ವಿಶ್ವನೇ ಆ ಹಿಡಿ ಸಕ್ಕರೆಯನ್ನು ತನ್ನ ಕೈಗೆ ಹಾಕಿಸಿಕೊಂಡು ಮುಕ್ಕಿದ.

"ಸಕ್ಕರೆ ಕಾರ್ಖಾನೆ ನೋಡುವುದಕ್ಕಿಂತ ಸಕ್ಕರೆಯನ್ನು ಮುಕ್ಕುವುದರಲ್ಲೇ ವಿಶ್ವನಿಗೆ ಹೆಚ್ಚು ಆಸಕ್ತಿಯಿರುವಂತಿದೆ...."

ಅನಂತು ವಿಶ್ವನನ್ನು ಗೇಲಿಮಾಡಿದ.

"ನಾನು ಮಂಡ್ಯಕ್ಕೆ ಬಂದಿದ್ದು ಸಕ್ಕರೆ ತಿನ್ನೋದಿಕ್ಕಲ್ವೆ? ಬೇಕಾದರೆ ಗಂಗನ್ನ ಕೇಳು...."

ವಿಶ್ವ ಹಿಡಿಯಲ್ಲಿದ್ದ ಸಕ್ಕರೆಯನ್ನು ಬಾಯಿಗೆ ಹಾಕಿಕೊಳ್ಳುತ್ತಾ ಹೇಳಿದ. ಸಕ್ಕರೆಯನ್ನು ಮುಕ್ಕುತ್ತಲೇ ಕಾರ್ಖಾನೆಯಲ್ಲೆಲ್ಲಾ ಓಡಾಡಿದ ವಿಶ್ವನಾಥನನ್ನು ನೋಡಿ ಮನಸ್ಸಿನಲ್ಲೇ ಗಂಗ ನಗುತ್ತಿದ್ದಳು.

"ದೇಹ ಬೆಳೆದಿದ್ದರೂ, ಮುಖದ ಮೇಲೆ ನೋಣದಂತಹ ಮೀಸೆಯಿದ್ದರೂ, ಬುದ್ಧಿ ಇನ್ನೂ ಬಲಿತಿಲ್ಲ....ನಾಲ್ಕು ವರ್ಷದ ಎಳೆಯ ಬಾಲಕನಂತಹ ಸ್ವಭಾವ", ಎಂದು ಗಂಗ ಯೋಚಿಸಿಕೊಂಡರೂ ಅವಳ ದೃಷ್ಟಿ ವಿಶ್ವನಾಥನನ್ನೇ ಅನುಸರಿಸುತ್ತಿತ್ತು.

"ಇವತ್ತಿನಿಂದ ನಿಮಗೆ ಸಕ್ಕರೆಯೆಂದರೇ ಜುಗುಪ್ಸೆಯುಂಟಾಗುವುದು ವಿಶ್ವನಾಥ್."

ವಿಶ್ವನಾಥ ಸಕ್ಕರೆಯನ್ನು ಮುಕ್ಕುತ್ತಿದ್ದ ವೈಖರಿಯನ್ನು ನೋಡಿ ನಗುತ್ತಾ ಹೇಳಿದ ಮಾಧವ.

"ಯಾಕೆ?" ದಿಗ್ಭ್ರಮೆಯಿಂದ ಬೆಪ್ಪಾಗಿ ವಿಶ್ವ ಅರ್ಥವಾಗದವನಂತೆ ಕೇಳಿದ.

"ಇವತ್ತೆಲ್ಲಾ ಸಕ್ಕರೆ ತಿಂದೂ ತಿಂದೂ ನಿಮಗೆ ಸಾಕಾಗಿ ಹೋಗಿದೆ. ಇನ್ನು ಮೇಲೆ ಸಿಹಿ ಎಂದರೆ ಜುಗುಪ್ಸೆಯಾಗುವುದರಲ್ಲಿ ಆಶ್ಚರ್ಯವೇನಿಲ್ಲ...."

"ಪ್ರತಿದಿನ ಈ ರೀತಿ ಸಕ್ಕರೆ ಮುಕ್ಕುತ್ತಿದ್ದರೂ ನನಗೆ ಸಿಹಿಯ ಮೇಲಿರುವ ಮಮತೆ ದೂರವಾಗುವುದಿಲ್ಲ....ಇಲ್ಲೇ ಈ ಕಾರ್ಖಾನೆಯಲ್ಲೇ ಒಂದು ಕೆಲಸ ಸಿಕ್ಕಿದರೆ....ನಿಶ್ಚಿಂತೆಯಿಂದ ವಿದ್ಯಾಭ್ಯಾಸಕ್ಕೆ ಶರಣು ಹೊಡೆದು ಬಂದುಬಿಡ್ತೀನಿ. ಪ್ರತಿದಿನವೂ ತೃಪ್ತಿಯಾಗುವವರೆಗೂ ಸಕ್ಕರೆ ತಿನ್ನುತ್ತಿರಬಹುದು...."

ಸಕ್ಕರೆಯ ಸಿಹಿಯನ್ನು ಸವಿಯುತ್ತಾ ಇದ್ದ ವಿಶ್ವ ಬಾಯಿ ಚಪ್ಪರಿಸಿದ.

ವಿಶ್ವನಾಥನ ಮಾತು ಕೇಳಿ ಸುತ್ತಲಿದ್ದವರೆಲ್ಲರೂ ಜೋರಾಗಿ ನಕ್ಕರು.

ಮಾರನೆಯದಿನ ಅನಂತು, ವಿಶ್ವನಾಥ ಹಾಸನಕ್ಕೆ ಪ್ರಯಾಣ ಬೆಳೆಸಿದರು.

ಅನಂತು, ಅವನಿಗಿಂತಲೂ ಹೆಚ್ಚಾಗಿ ವಿಶ್ವ ಹೊರಟು ಹೋದ ಮೇಲೆ ಗಂಗೆಗೆ ಮನೆಯೇ ಬರಿದಾದಂತೆ ತೋರಿತು. ವಿಶ್ವನಾಥ ತನ್ನ ಜೊತೆಯಲ್ಲೇ ಹರಟೆ, ನಗು, ಹಾಸ್ಯ ಇವುಗಳನ್ನೂ ತೆಗೆದುಕೊಂಡು ಹೊರಟು ಹೋಗಿದ್ದ.

"ಹುಡುಗನ ಸ್ವಭಾವ ನನಗೆ ತುಂಬಾ ಹಿಡಿಸಿತು. ಸ್ವಲ್ಪವೂ ಬಿಗುಮಾನ ವಿಲ್ಲ...."

—ಮೊಸರನ್ನದ ತುತ್ತನ್ನು ಬಾಯಿಗಿಡುತ್ತಾ ಹೇಳಿದ ಮಾಧವನ ಮಾತಿಗೆ ಕುಮುದ ತಲೆತೂಗಿದಳು.

"ಹೌದು. ಅನಂತು ಚಿಕ್ಕವನಾಗಿದ್ದಾಗ ಯಾವ ರೀತಿ ಇದ್ದನೋ ಈಗಲೂ ಅದೇ ರೀತಿ ಇದ್ದಾನೆ. ಅವನು ಖಂಡಿತವಾಗಿ ತಂದೆ ತಾಯಿಗಳ ಬಡತನವನ್ನು ಕೊನೆಗಾಣಿಸುತ್ತಾನೆ."

"ಅನಂತು ನಮ್ಮ ಕಣ್ಣು ಮುಂದೆ ಬೆಳೆದ ಹುಡುಗ. ನಾನು ಹೇಳಿದ್ದು ಅನಂತೂ ವಿಷಯವಲ್ಲ....ವಿಶ್ವನಾಥನನ್ನು ಕುರಿತು ನಾನು ಆಡಿದ್ದು...."

"ಹೌದು....ಶ್ರೀಮಂತರ ಮನೆಯ ಹುಡುಗನಾಗಿದ್ದರೂ ಸ್ವಲ್ಪವೂ ಜಂಭ ವಿಲ್ಲ. ಒಂದೇ ಒಂದು ದಿವಸದಲ್ಲಿ ನಮ್ಮ ಮನೆಯವರಂತೆ ಹೊಂದಿಕೊಂಡು ಬಿಟ್ಟಿದ್ದ...."

ತುಪ್ಪದ ಪಾತ್ರೆಯನ್ನು ಅಡಿಗೆಮನೆಯ ಬೀರುವಿನಲ್ಲಿಡುತ್ತಿದ್ದ ಕುಮುದ ಗಂಡನ ಮಾತನ್ನು ಅನುಮೋದಿಸಿದಳು.

* * * *

ರಜಾದಿನಗಳು ಮುಗಿದ ಕೂಡಲೆ ಗಂಗ ಹಾಸ್ಟಲಿಗೆ ಬಂದಳು. ಆ ವರ್ಷ ಅವಳು ಮೂರನೆ ವರ್ಷದ ಎಂ. ಬಿ. ಬಿ. ಎಸ್. ತರಗತಿಯಲ್ಲಿ ಓದುತ್ತಿದ್ದ ಮಾಲತಿಯೊಡನೆ ಒಂದು ಪುಟ್ಟ ಕೋಣೆಯನ್ನು ಹಂಚಿಕೊಳ್ಳಬೇಕಾಯಿತು.

ಮಾತು, ಹರಟೆ, ವಿನೋದ ಇವುಗಳಲ್ಲಿ ಮಾಲತಿಗೆ ಸ್ವಲ್ಪವೂ ಆಸಕ್ತಿ ಯಿರಲಿಲ್ಲ. ಅವಳು ಕಾಲೇಜಿನಿಂದ ಹಾಸ್ಟಲ್ಲಿಗೆ ಬಂದ ಕೂಡಲೆ ಹೊಟ್ಟೆಗೇನಾದರೂ ಹಾಕಿಕೊಂಡು ಪುಸ್ತಕ ಹಿಡಿದು ಮೈ ಮರೆಯುತ್ತಿದ್ದಳು. ಹಾಸ್ಟಲಿನ ಕಾಂಪೌಂಡಿ ನಲ್ಲಿ ಬೆಳೆದಿದ್ದ ಯಾವುದಾದರೊಂದು ಮರದ ಬುಡದ ಬಳಿಯಲ್ಲಿ ಕುಳಿತು ಮಾಲತಿ ಓದಿಕೊಳ್ಳುತ್ತಿದ್ದಳು. ರೂಮಿನಲ್ಲಿ ಒಂಟಿಯಾಗಿ ಕುಳಿತು ನಿಶ್ಶಬ ವಾದ ವಾತಾವರಣದಲ್ಲಿ ಗಂಗ ಓದಿಕೊಳ್ಳುತ್ತಿದ್ದಳು.

ದೊಡ್ಡದಾದ ಮರದ ಮೇಜಿನ ಮೇಲೆ ನಗ್ನವಾಗಿ ಮಲಗಿದ್ದ ಗಂಡು ಶವದ ಸುತ್ತಲೂ ವಿದ್ಯಾರ್ಥಿ, ವಿದ್ಯಾರ್ಥಿನಿಯರು ಸುತ್ತುವರೆದು ನಿಂತಿದ್ದರು. ವೈದ್ಯ

ರೊಬ್ಬರು ಆ ಕೊಳೆತು ನಾರುತ್ತಿದ್ದ ದೇಹದ ಮಧ್ಯಭಾಗವನ್ನು ಕತ್ತರಿಸಿ, ಒಳಗಿರುವ ಭಾಗಗಳನ್ನು ವಿದ್ಯಾರ್ಥಿಗಳಿಗೆ ತೋರಿಸಿ ವಿವರಿಸುತ್ತಿದ್ದರು. ಆ ಕೊಳೆತ ದೇಹದ ತುಂಬ ಹುಳುಗಳು ತುಂಬಿಕೊಂಡಿದ್ದವು. ಕತ್ತರಿಸಿದ ಭಾಗವನ್ನು ಹಿಗ್ಗಲಿಸಿ ಹಿಡಿದುಕೊಂಡಿದ್ದ ವೈದ್ಯರ ಎಡಗೈ ಮೇಲೆ ಹುಳುಗಳು ಹತ್ತಿ ಹತ್ತಿ ಬರುತ್ತಿದ್ದವು. ಆ ವೈದ್ಯರು ಬಲಗೈಯಿಂದ ಹುಳುಗಳನ್ನು ಕೆಳಕ್ಕೆ ತಳ್ಳುತ್ತಾ ಹುಡುಗರಿಗೆ ದೇಹದ ಭಾಗಗಳನ್ನು ವಿವರಿಸುತ್ತಲೇ ಇದ್ದರು.

ಮೊದಲನೆಯ ಬಾರಿ ನಗ್ನವಾಗಿದ್ದ ಶವವನ್ನು ನೋಡಿದ ಕೂಡಲೆ ಗಂಗೆಗೆ ತಲೆ ಸುತ್ತಿ ಬೀಳುವಂತಾಯಿತು. ಸಿಡಿದು ಹೋಳಾಗುವಂತಿದ್ದ ತಲೆಯನ್ನು ಎರಡು ಕೈಗಳಿಂದಲೂ ಅದುಮಿ ಹಿಡಿದು ನಿಂತಿದ್ದ ಗಂಗಳನ್ನು ವಿಶ್ವನಾಥ ನೋಡಿದ. ಹುಡುಗರ ಗುಂಪಿನಲ್ಲಿದ್ದ ವಿಶ್ವನಾಥ ಗಂಗಳ ಸಮೀಪಕ್ಕೆ ಬಂದು ಅವಳ ತಲೆಯ ಬಳಿ ಪಿಸುಗುಟ್ಟಿದ.

"ಯಾಕೆ....ಮುಖವೆಲ್ಲಾ ಬಿಳುಚಿಕೊಂಡಿದೆ....ಹೆದರಿಕೆಯಾಯ್ತೇನು ?"

"ಇಲ್ಲ....ಸ್ವಲ್ಪ ತಲೆನೋವು ಅಷ್ಟೆ...."

ಪರಿಚಿತ ಧ್ವನಿಯನ್ನು ಕೇಳಿ ಗಂಗ ಕಣ್ಣು ತೆರೆದಳು.

"ಹೆಣ ನೋಡಿಯೇ ಇಷ್ಟೊಂದು ಹೆದರಿಬಿಟ್ಟರೆ ಏನು ಗತಿ ? ವೈದ್ಯಳಾಗಿ ನೀವು ಇನ್ನೂ ಎಂತೆಂಥ ಕೆಲಸಗಳನ್ನು ಮಾಡಬೇಕಾಗುವುದೋ ?"

ವಿಶ್ವನಾಥನ ಮಾತು, ಮರೆತು ಮಲಗಿದ್ದ ಅವಳ ಬದುಕಿನ ಗುರಿಯೆಂಬ ಕಾಳ ಸರ್ಪವನ್ನು ಹೊಡೆದೆಬ್ಬಿಸಿತು.

ಕಾಲೇಜಿನಲ್ಲಿ, ಆಸ್ಪತ್ರೆಯಲ್ಲಿ ಗಂಗ ದಿನಕ್ಕೆ ಒಂದೆರಡು ಬಾರಿಯಾದರೂ ವಿಶ್ವನಾಥನನ್ನು ಭೇಟಿಯಾಗುತ್ತಿದ್ದಳು. ಗಂಗಳನ್ನು ನೋಡಿದಾಗಲೆಲ್ಲಾ, ಅವಳೊಡನೆ ಸ್ವಲ್ಪ ಹೊತ್ತು ಮಾತನಾಡದಿದ್ದರೆ ವಿಶ್ವನಾಥನ ಮನಸ್ಸಿಗೆ ಸಮಾಧಾನವಾಗುತ್ತಿರಲಿಲ್ಲ. ಒಂದು ದಿನ ಗಂಗ ಸೈಕಲ್ಲನ್ನು ಗೋಡೆಗೊರಗಿಸುತ್ತಿದ್ದಾಗ ವಿಶ್ವನಾಥ ಅವಳನ್ನು ನೋಡಿದ. ತನ್ನ ಸೈಕಲ್ಲನ್ನೂ ತಳ್ಳಿಕೊಂಡು ಬಂದು ಅವಳ ಪಕ್ಕದಲ್ಲಿ ಬಂದು ನಿಂತುಕೊಂಡ.

"ಓ ! ನೀವಾ ? ಯಾರೋ ಅಂತ ಹೆದರಿಕೊಂಡ್ಬಿಟ್ಟೆ...."

ಗಂಗ ಸದ್ದಾಗದಂತೆ ಹಿಂದೆ ಬಂದು ನಿಂತ ಯುವಕ ವಿಶ್ವನಾಥನೆಂದು ತಿಳಿಯದೆ ಮೊದಲು ಬೆಚ್ಚಿದಳು....

"ಯಾಕೆ....ಎರಡುದಿನ ನೀವು ಕಾಲೇಜಿನ ಕಡೆಗೇ ಬಂದ ಹಾಗೆ ಕಾಣಿಸಲಿಲ್ವಲ್ಲಾ ?"

ವಿಶ್ವನಾಥ ಕಾಲೇಜಿಗೆ ಬಂದ ಕೂಡಲೆ ಗಂಗಳಿಗಾಗಿ, ಅವಳ ಮುದ್ದು ಮುಖಕ್ಕಾಗಿ ಕಣ್ಣೋಡಿಸುತ್ತಿದ್ದ. ಎರಡು ದಿನ ಗಂಗಳನ್ನು ನೋಡದೆ ಅವನಿಗೆ ಬಹಳ ನಿರಾಶೆಯಾಗಿತ್ತು.

"ಜಾರಿ ಬಿದ್ದು ಕಾಲುಳುಕಿಸಿಕೊಂಡಿದ್ದೆ...."

ಗಂಗ ನಗುತ್ತಾ ವಿಶ್ವನಾಥನಿಗೆ ತನ್ನ ಗೈರುಹಾಜರಿಗೆ ಕಾರಣವನ್ನು ತಿಳಿಸಿದಳು.

"ಈಗ ನಿಮ್ಮ ಕಾಲು ಸರಿಹೋಯಿತೆ ?"

"ನನ್ನ ಕಾಲು ಈ ಜನ್ಮದಲ್ಲಿ ಸರಿಹೋಗಲಾರದು ವಿಶ್ವನಾಥ್...."

ಶೂನ್ಯಳಾಗಿ ದಿಗಂತದತ್ತ ದೃಷ್ಟಿಸಿ ನೋಡುತ್ತಾ ಗಂಭೀರವಾದ ಧ್ವನಿಯಲ್ಲಿ ಗಂಗ ಹೃದಯದ ವೇದನೆಯನ್ನು ವಿಶ್ವನಾಥನ ಮುಂದೆ ನಿವೇದಿಸಿಕೊಂಡಳು.

"ಈ ಪುಸ್ತಕ ನಿಮಗೆ ಬೇಕಾಗಿತ್ತೇನು ?"

ವಿಶ್ವನಾಥ ಕಪ್ಪು ರೊಟ್ಟಿನ ದಪ್ಪನಾದ ಅನಾಟಮಿಯ ಪುಸ್ತಕವೊಂದನ್ನು ಗಂಗೆಯ ಮುಂದೆ ಚಾಚಿದ.

"ಹೌದು....ಆದರೆ ನಿಮಗೆ ಹೇಗೆ ಈ ಪುಸ್ತಕ ಸಿಕ್ಕಿತು ?"

ಗಂಗ ಆಶ್ಚರ್ಯದಿಂದ ಪುಸ್ತಕವನ್ನು ಕೈಗೆ ತೆಗೆದುಕೊಳ್ಳುತ್ತಾ ಪ್ರಶ್ನೆ ಮಾಡಿದಳು.

"ನಾನು ಈ ಪುಸ್ತಕವನ್ನೂ ಜೊತೆಗೆ ನಾಲ್ಕು ಪುಸ್ತಕಗಳನ್ನೂ ಕೊಂಡು ಕೊಂಡೆ."

"ನೀವು ಶ್ರೀಮಂತರು. ಒಂದೊಂದು ಪುಸ್ತಕಕ್ಕೆ ಅರವತ್ತು, ಎಪ್ಪತ್ತು ರೂಪಾಯಿಗಳನ್ನು ಕೊಟ್ಟು ಕೊಂಡುಕೊಳ್ಳುತ್ತೀರಿ. ಆದರೆ ನನ್ನಂತಹ ಬಡವರ ಪಾಡು....?"

"ನಿಮ್ಮಂತಹ ಬಡವರಿಗೆ ಸಹಾಯಮಾಡಲು ನಮ್ಮಂತಹ ಶ್ರೀಮಂತ ರಿಲ್ಲವೆ ?"

ವಿಶ್ವನಾಥ ಗಂಗಳನ್ನು ನೆಟ್ಟದೃಷ್ಟಿಯಿಂದ ನೋಡುತ್ತಾ ಹೇಳಿದ.

ಅವಳ ತುಂಬಿದ ಕೆನ್ನೆಯನ್ನು ಸವರುತ್ತಾ ಹಿಂದಕ್ಕೆಹೋಗಿ ಮತ್ತೆ ಬಂದು ಮುತ್ತಿಡುತ್ತಿದ್ದ ಅವಳ ಕಿವಿಯಲ್ಲಿದ್ದ ಚಿನ್ನದ ಜುಮುಕಿಯಲ್ಲಿ ವಿಶ್ವನಾಥ ಅಸೂಯೆ ತಾಳಿದ.

"ಆ ಜುಮುಕಿಗಿರುವಷ್ಟು ಅದೃಷ್ಟ ನನಗಿಲ್ಲವಲ್ಲಾ !" ಎಂದು ಮನಸ್ಸಿನಲ್ಲೇ ಹಲುಬಿದ.

"ನನಗೆ ನಿಮ್ಮ ಹತ್ತಿರ ಇರುವ ಪುಸ್ತಕಗಳನ್ನು ಆಗಾಗ್ಯೆ ಕೊಡುತ್ತೀರ ತಾನೆ ?"

"ಓಹೋ ! ಈ ಸೇವಕ ನಿಮ್ಮ ಸೇವೆಗೆ ಸದಾ ಸಿದ್ಧನಾಗಿರುತ್ತಾನೆ...."

ವಿಶ್ವನಾಥ ನಾಟಕೀಯವಾಗಿ ನುಡಿದು ತಲೆಬಾಗಿ ನಿಂತು ಗಂಗಳಿಗೆ ಸಲಾಮು ಮಾಡಿದ.

ಮಾರನೆಯ ದಿನ ರಜಾದಿನವಾಗಿದ್ದುದರಿಂದ ಗಂಗ ಎಣ್ಣೆನೀರು ಹಾಕಿ ಕೊಂಡಳು. ಗಂಗ ಬಿಳಿಯ ವಾಯಿಲ್ ಸೀರೆಯುಟ್ಟು, ಬಿಳಿಯ ಪಾಪ್ಲಿನ್ ರವಿಕೆಯನ್ನು ಧರಿಸಿ, ಒದ್ದೆಯಾಗಿದ್ದ ಕೂದಲುಗಳನ್ನು ಬೆನ್ನಿನ ಮೇಲೆ ಹರಡಿ ಕೊಂಡು ಬಿಸಿಲಿನಲ್ಲಿ ನಿಂತುಕೊಂಡಳು.

"ಗಂಗಮ್ನೋರೆ....ನಿಮ್ಮನ್ನು ನೋಡೋದಕ್ಕೆ ಯಾರೋ ಬಂದಿದ್ದಾರೆ...." ಹಾಸ್ಟಲಿನ ಜವಾನ ಗಂಗೆಗೆ ಹೇಳಿದ.

"ಯಾರು....?"

"ಯಾರೋ ಗಂಡಸರು ಅಮ್ನೋರೆ....ಹೆಸರು ಗೊತ್ತಿಲ್ಲ...."

ಗಂಗ ಹೆಜ್ಜೆ ಹೆಜ್ಜೆಗೂ ಯೋಚಿಸುತ್ತಾ ನಡೆದಳು.

"ಅಣ್ಣ ಬಂದಿರಬಹುದೆ ? ಅವರು ನನಗೆ ಕಾಗದ ಬರೆಯದೆ ಎಂದೂ ಹಾಸ್ಟಲ್ಲಿಗೆ ಬಂದಿಲ್ಲ...."

"ಹಾಸ್ಟಲ್ಲಿನ 'ಅಭ್ಯಾಗತರ ಕೋಣೆ' ಯೊಳಗೆ ಗಂಗ ನಿಧಾನವಾಗಿ ಬಂದಳು. ಮೇಜಿನ ಮುಂದೆ ಸೂಟು ಧರಿಸಿದ್ದ ವ್ಯಕ್ತಿ ಮುಖಕ್ಕೆ ಅಡ್ಡಲಾಗಿ ಪತ್ರಿಕೆ ಯೊಂದನ್ನು ಹಿಡಿದು ಕುಳಿತಿರುವುದನ್ನು ಗಂಗ ಕಂಡಳು. ಅವರ ಮುಖವನ್ನು ನೋಡಲು ಅವಳು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಅವಳು ಮೇಜಿನ ಬಳಿ ನಿಂತು ನವಿರಾಗಿ ಗಂಟಲನ್ನು ಸರಿಪಡಿಸಿಕೊಂಡಳು.

"ಯಾರೂ ?"

"ನಾನೂ....?"

ಗಂಗೆ ಕೇಳಿದ ಧಾಟಿಯಲ್ಲೇ ವಿಶ್ವನಾಥ ಉತ್ತರಕೊಟ್ಟು ಎದ್ದು ನಿಂತ. ವರಪೂಜೆಗೆ ಸಿದ್ಧವಾಗಿರುವ ಗಂಡಿನಂತೆ ವಿಶ್ವನಾಥ ಅಲಂಕರಿಸಿಕೊಂಡಿದ್ದ. ಗಂಗ ಕಾರ್ಮೋಡಗಳಿಂದ ತುಂಬಿರುವ ಮುಗಿಲ ವರ್ಣದ ಸೂಟನ್ನು ಹಾಕಿಕೊಂಡಿದ್ದ ವಿಶ್ವನಾಥನನ್ನೇ ಕ್ಷಣಕಾಲ ಮೈಮರೆತು ನೋಡುತ್ತಾ ನಿಂತುಕೊಂಡಳು. ಅವನ ಉಬ್ಬಿದ ದಷ್ಟಪುಷ್ಟವಾಗಿದ್ದ ಕೊರಳನ್ನು ಬಳಸಿದ್ದ ಕಪ್ಪು ಬಿಳುಪಿನ ಗೆರೆಗಳಿದ್ದ ಟೈಯೊಂದು ಅವನ ಎದೆಯ ಮಧ್ಯಭಾಗದಲ್ಲಿ ಇಳಿಬಿದ್ದಿತ್ತು.

ವಿಶ್ವನದು ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆನ್ನಿಸುವ ಮೈಕಟ್ಟು. ಆ ನೀಲಿಯ ಸೂಟು ಅವನ ಮೈಕಟ್ಟನ್ನು ಎತ್ತಿ ತೋರಿಸುತ್ತಿತ್ತು. ಕಣ್ಣಿಗೆ ತೃಪ್ತಿಯಾಗುವವರೆಗೂ ನಿಂತು ನೋಡಲು ಗಂಗೆಗೆ ಅಪೇಕ್ಷೆಯಾದರೂ ಆ ರೀತಿ ದೃಷ್ಟಿಸಿ ನೋಡಲು ಅವಳ ಸಂಕೋಚ ಸ್ವಭಾವ ಅಡ್ಡಿಯಾಯಿತು.

"ಪುಸ್ತಕಗಳನ್ನು ತಂದಿದ್ದೇನೆ...."

ವಿಶ್ವನನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದ ಗಂಗಳ ಕಣ್ಣುಗಳು ಎಚ್ಚೆತ್ತುಕೊಂಡು ನೆಲದತ್ತ ಬಾಗಿದವು.

"ನಿಮಗೆ ನನ್ನಿಂದ ತುಂಬಾ ತೊಂದರೆಯಾಯಿತೇನೊ....? ಅಂದ್ಹಾಗೆ ನಿಮ್ಮ ಮೀಸೆ....?"

ವಿಶ್ವನಾಥನ ಮುಖದ ಮೇಲಿದ್ದ ತುಂಡು ಮೀಸೆ ಮಾಯವಾಗಿರುವುದನ್ನು ಗಂಗ ಗಮನಿಸಿದಳು. ಧೈರ್ಯದಿಂದ ವಿಶ್ವನನ್ನೇ ಕೇಳುವ ಸಾಹಸಕ್ಕೆ ಕೈ ಹಾಕಿದಳು.

" 'ನನ್ನ ಮುಖಕ್ಕೆ ಮೀಸೆ ಒಪ್ಪುವುದಿಲ್ಲ' ಎಂದು ಎಲ್ಲರೂ ಹೇಳ್ತಾ ಇದ್ದರು. ನಿನ್ನೆ ತೆಗೆದು ಬಿಸಾಕಿದೆ...."

ವಿಶ್ವ ಮೀಸೆಯಿದ್ದ ಜಾಗದ ಮೇಲೆ ಬೆರಳನ್ನಾಡಿಸುತ್ತ ಹೇಳಿದ.

"ನನಗೂ ಹಾಗೆ ಅನ್ನಿಸುತ್ತಿತ್ತು. ಮೀಸೆ ಹೋದ ಮೇಲೆ ನೀವು ಇನ್ನೂ ಹೆಚ್ಚು ಲಕ್ಷಣವಾಗಿ ಕಾಣಿಸುತ್ತೀರಿ...."

"ಹೌದೇನು ? 'ಮೀಸೆ ತೆಗೆದುಹಾಕಿ' ಎಂದು ಮೊದಲೇ ನೀವು ಹೇಳಿದ್ದರೆ ಆಗಲೇ....ನೀವು ಹೇಳಿದ ದಿವಸವೇ ನಾನು ಮೀಸೆಯನ್ನು ತೆಗೆದುಹಾಕುತ್ತಿದ್ದೆ ನಲ್ಲಾ...."

"ಇನ್ನು ಮೇಲೆ ಮೀಸೆ ಮಾತ್ರ ಬಿಡಬೇಡಿ...."

"ಖಂಡಿತವಾಗಿ ಇಲ್ಲ...."

"ನನ್ನದೊಂದು ಕೋರಿಕೆಯಿದೆ, ನೀವು ಅದನ್ನು ನಡೆಸಿಕೊಡುತ್ತೀರಾ ?"

ವಿಶ್ವನಾಥನ ಮುಖದ ಮೇಲಿದ್ದ ದೈನ್ಯಭಾವವನ್ನು ಕಂಡು ಗಂಗೆ ಮರುಗಿದಳು.

"ನಿಮ್ಮ ಕೋರಿಕೆಯನ್ನು ನಡೆಸಿಕೊಡುವ ಶಕ್ತಿ ನನಗಿದ್ದರೆ...."

"ನಿಮ್ಮಿಂದ ಅಸಾಧ್ಯವಾಗುವಂತಹ ಕೆಲಸವನ್ನು ನಾನು ನಿಮಗೆ ಹೇಳುತ್ತೇನೆಯೆ ? ಗಾಯಿತ್ರೀ ಟಾಕೀಸಿನಲ್ಲಿ 'ಫಾರ್ ಹೂಮ್ ದಿ ಬೆಲ್ ಟಾಲ್ಸ್' ಎಂಬ ಚಿತ್ರ ನಡೆಯುತ್ತಿದೆ. ನಾವಿಬ್ಬರೂ ಈ ದಿನ ಮಧ್ಯಾಹ್ನ ಹೋಗೋಣವೆ ?"

ಅಂಜುತ್ತ, ಅಳುಕುತ್ತಾ ತನ್ನಾಸೆಯನ್ನು ಗಂಗಳ ಮುಂದೆ ವಿಶ್ವ ಅರಿಕೆ ಮಾಡಿಕೊಂಡ.

"ಅಷ್ಟೇ ತಾನೆ ? ಧಾರಾಳವಾಗಿ ಹೋಗಿ ಬರೋಣ...."

ಯೋಚಿಸದೆ 'ಹೂಂ' ಗುಟ್ಟಿದ ಮೇಲೆ ಗಂಗ ಬೆಚ್ಚಿದಳು.

ಪರಪುರುಷನೊಡನೆ ಚಿತ್ರಮಂದಿರಕ್ಕೆ ಪ್ರಾಯಕ್ಕೆ ಬಂದಿರುವ ತಾನು ಭೇಟಿ ಕೊಡುವುದು ಸರಿಯೆ ? ನೋಡಿದವರು ನಗಬಹುದಲ್ಲವೆ ? ನಮ್ಮ ಮೇಲೆ ಸುಳ್ಳಿನ ಮಾತುಗಳನ್ನು ಪೋಣಿಸಿ ಪ್ರಚಾರಮಾಡಿ ಇಬ್ಬರಿಗೂ ಕಳಂಕ ತಂದರೆ ?

ವಿಶ್ವನಾಥನ ಸಹವಾಸ, ಅವನ ಸಾಮೀಪ್ಯವನ್ನು ಗಂಗೆಯ ಅಂತರಂಗವೂ ಬಯಸುತ್ತಿತ್ತು. ಪರಿಚಿತ ಹುಡುಗನ ಸಂಗಡ ಚಿತ್ರ ನೋಡಲು ಹೋಗುವುದು ಮಹಾಪರಾಧವೆ ?....ಎಂದಿಗೂ ಇಲ್ಲ ಎಂದು ಗಂಗ ನಿರ್ಧರಿಸಿಕೊಂಡಳು.

ಕಲ್ಲುಸಕ್ಕರೆಗಾಗಿ ದೈನ್ಯದಿಂದ ಮುಂದೆ ನಿಂತು ಕೈ ನೀಡಿ ಅಂಗಲಾಚಿ ಬೇಡುವ ಬಾಲಕನಂತೆ ತನ್ನನ್ನು ಕೇಳಿಕೊಳ್ಳುತ್ತಿರುವ ವಿಶ್ವನಾಥನನ್ನು ನಿರಾಶೆಗೊಳಿಸಲು ಗಂಗೆಗೆ ಮನಸ್ಸಾಗಲಿಲ್ಲ. ವಿಶ್ವ ಸಂತೋಷದಿಂದ ಎದ್ದು ನಿಂತುಕೊಂಡ.

"ನಾನಿನ್ನು ಬರ್ತೀನಿ....ಮಧ್ಯಾಹ್ನ ಮೂರು ಗಂಟೆಗೆ ಸರಿಯಾಗಿ ನಾನು ಹಾಸ್ಟಲ್ಲಿಗೆ ಬರ್ತೀನಿ, ನೀವು ಸಿದ್ಧವಾಗಿರ್ತೀರಾ ತಾನೆ....?"

"ಹೂಂ....ಪುಸ್ತಕಗಳನ್ನು ಮುಂದಿನ ವಾರದವರೆಗೆ ನಾನಿಟ್ಟುಕೊಳ್ಳಬಹುದೆ ?"

"ಒಂದು ತಿಂಗಳಾದರೂ ಇಟ್ಟುಕೊಂಡಿರಿ. ನನ್ನಂತಹ ಓದದ ಸೋಮಾರಿ ವಿದ್ಯಾರ್ಥಿಗಳ ಬಳಿ ಈ ಪುಸ್ತಕಗಳು ಇರುವುದಕ್ಕಿಂತ ನಿಮ್ಮಂತಹ ಓದುವ ವಿದ್ಯಾರ್ಥಿಗಳ ಬಳಿ ಇದ್ದರೇ ಹೆಚ್ಚು ಸೊಗಸು. ನಾನಿನ್ನು ಬರ್ತೀನಿ...."

ಗಂಗ ಕಣ್ಣಿಗೆ ಕಾಣಿಸುವವರೆಗೂ ಕೈ ಬೀಸುತ್ತಿದ್ದು ಸೈಕಲ್ ಹತ್ತಿದ ವಿಶ್ವ, ತನ್ನ ಹಾಸ್ಟಲ್ಲಿನ ದಾರಿ ಹಿಡಿದ.

ಮಾರನೆಯ ದಿನ ಅನಂತು ವಿಶ್ವನನ್ನು ತರಾಟೆಗೆ ತೆಗೆದುಕೊಂಡ....

"ನಿನ್ನೆ ಸಿನೀಮಾ ಹೇಗಿತ್ತಮ್ಮಾ....?"

"ನಾನು ಸಿನಿಮಾಕ್ಕೆ ಹೋಗಿದ್ದೆ ಎನ್ನುವುದು ನಿನಗೆ ಹೇಗೆ ತಿಳಿಯಿತು ಅನಂತು ?"

"ಬೆಕ್ಕು ಕಣ್ಣುಮುಚ್ಚಿ ಕೊಂಡು ಹಾಲು ಕುಡಿದರೆ ಸುತ್ತಲಿದ್ದವರೂ ಕಣ್ಣು ಮುಚ್ಚಿಕೊಂಡು ನಿಲ್ಲುತ್ತಾರೇನು ? ಅಯ್ಯೋ ಬೆಪ್ಪೆ....ನೀನು, ಗಂಗ, 'ಫಾರ್

ಹೂಮ್ ದಿ ಬೆಲ್ ಟಾಲ್ಸ್' ಚಿತ್ರಕ್ಕೆ ನಿನ್ನೆ ಹೋಗಿದ್ದ ವಿಷಯ ಕಾಲೇಜಿನಲ್ಲಿ ಎಲ್ಲರಿಗೂ ತಿಳಿದಿದೆ...."

"ತಿಳಿಯಲಿ ಅನಂತು....ನಾನೇನು ತಪ್ಪು ಕೆಲಸ ಮಾಡುತ್ತಿದ್ದೀನೇನು ?"

"ವಿಶ್ವ ನೀನು ಸ್ವಲ್ಪ ಯೋಚನೆ ಮಾಡಿ ನೋಡು. ನಿಮ್ಮಿಬ್ಬರ ವಿಷಯ ವಾಗಿ ಕಾಲೇಜಿನಲ್ಲಾಗಲೇ ಗುಸುಗುಸು ಪ್ರಾರಂಭವಾಗಿದೆ. ಆಕೆಯೊಡನೆ ಓಡಾಡಿದರೆ ನಿನಗೆ ಬಂದ ಭಾಗ್ಯವಾದರೂ ಏನು ವಿಶ್ವ ? ಹಸುಳೆಯಂತಹ ಆ ಹೆಣ್ಣುಮಗಳ ಹೆಸರಿಗೆ ನೀನು ಕಂಕಳ ತರುತ್ತಿದ್ದೀಯ....ಎಚ್ಚರಿಕೆ !"

"ಅನಂತು....ನನ್ನ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ಈ ದಿನ ನಿನಗೆ ತಿಳಿಸಿಬಿಡುತ್ತೇನೆ. ಆ ಹುಡುಗಿಯೊಡನೆ ನಾನು ಹುಡುಗಾಟವಾಡುತ್ತಿಲ್ಲ. ಆಕೆಯ ಹೆಸರಿಗೆ ಕಳಂಕ ತರಬೇಕೆಂಬ ಉದ್ದೇಶವೂ ನನಗಿಲ್ಲ. ಗಂಗೆಯನ್ನು ನೋಡಿದಾಗಿನಿಂದ, ಆಕೆಯ ಸ್ವಭಾವ ಹೆಚ್ಚು ಹೆಚ್ಚು ತಿಳಿದಂತೆಲ್ಲಾ ನಾನು ಅವಳಿಂದ ಹೆಚ್ಚು ಹೆಚ್ಚು ಆಕರ್ಷಿಸಲ್ಪಡುತ್ತಿದ್ದೇನೆ."

"ಇದರ ಪರಿಣಾಮವನ್ನು ನೀನು ಯೋಚಿಸಿದ್ದೀಯಾ ?"

"ಗಂಗಳ ಅನುಮತಿ ಸಿಕ್ಕಿದರೆ ನಾನು ಖಂಡಿತವಾಗಿ ಅವಳನ್ನು ಮದುವೆ ಯಾಗಬೇಕೆಂದಿದ್ದೇನೆ...."

ವಿಶ್ವನಾಥನ ಮಾತು ಅನಂತರಾಮುವಿಗೆ ಬಹಳ ಅನಿರೀಕ್ಷಿತವಾಗಿತ್ತು. ಸಿಡಿಲು ಬಡಿಸಿಕೊಂಡವನಂತೆ ಮುಖದಲ್ಲಿ ಗಾಬರಿಯನ್ನು ತುಂಬಿಕೊಂಡು ತಲೆ ಎತ್ತಿ ವಿಶ್ವನನ್ನು ನೋಡಿದ ಅನಂತು.

"ವಿಶ್ವ....ನಿನ್ನ ಆರೋಗ್ಯ ಈ ದಿನ ಸರಿಯಾಗಿರುವಂತಿಲ್ಲ. ಮನಸ್ಸಿಗೆ ಬಂದಂತೆ ಮಾತನಾಡುತ್ತಿದ್ದೀಯಾ, ಹೋಗಿ ಸ್ವಲ್ಪಹೊತ್ತು ಮಲಗಿಕೊ...."

"ಮನಸ್ಸಿನಲ್ಲಿರುವುದನ್ನು ನಿನ್ನ ಮುಂದಿಟ್ಟೆ ಅನಂತು....ಮನಸ್ಸಿಗೆ ಬಂದಂತೆ ನಾನು ಹರಟುತ್ತಿಲ್ಲ...."

"ನೀನು ಕುಂಟಿಯನ್ನು ಮದುವೆಯಾಗುತ್ತೀಯ ವಿಶ್ವ ?"

ವಿಶ್ವನ ಮನಸ್ಸಿನಲ್ಲಿರುವುದನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಅನಂತು ಪ್ರಯತ್ನಿಸಿದ.

"ನಮ್ಮಿಬ್ಬರ ಮದುವೆಗೆ ಅವಳ ಒಂದು ಕುಂಟಕಾಲು ಅಡ್ಡಿಯಾಗುವುದಿಲ್ಲ ಅನಂತು. ಗಂಗಳ ಮುದ್ದುಮುಖ ನೋಡುತ್ತಿದ್ದರೆ, ಅವಳ ಮಾತು ಕೇಳು ತ್ತಿದ್ದರೆ, ಅವಳ ಸಹವಾಸದಲ್ಲಿದ್ದರೆ ನನಗೆ ಅವಳು ಕುಂಟಿಯೆನ್ನುವ ವಿಷಯ ಸಂಪೂರ್ಣವಾಗಿ ಮರೆತುಹೋಗುವುದು...."

ವಿಶ್ವನ ಭೂಮಿತೂಕದ ಮಾತುಗಳನ್ನು ಕೇಳಿ ಅನಂತು ಮೆಚ್ಚಿಗೆಯಿಂದ ತಲೆತೂಗಿದ.

"ಗಂಗಳ ಅಭಿಪ್ರಾಯವನ್ನು ತಿಳಿದುಕೊಂಡಿದ್ದೀಯಾ ವಿಶ್ವ ?"

"ನನ್ನ ಊಹೆ ನಿಜವಾಗಿದ್ದರೆ ಅವಳು ಖಂಡಿತವಾಗಿ ನನ್ನನ್ನು ಮದುವೆಯಾಗಲು ಒಪ್ಪಿಕೊಳ್ಳುತ್ತಾಳೆ. ನಮ್ಮಿಬ್ಬರ ವಿದ್ಯಾಭ್ಯಾಸ ಮುಗಿಯುವವರೆಗೂ ಮದುವೆಯ ಪ್ರಸ್ತಾಪಮಾಡುವುದು ನನಗೆ ಬೇಕಿಲ್ಲ...."

"ಕ್ಷಮಿಸು ವಿಶ್ವ....ನೀನು ಗಂಗಳ ಜೊತೆಯಲ್ಲಿ ಓಡಾಡುತ್ತಿರುವ ವಿಷಯ ತಿಳಿದಾಗ ನನಗೆ ನಿನ್ನ ಮೇಲೆ ಬಹಳ ಕೋಪ ಬಂದಿತ್ತು. ನಾನು ಒಂದು ವಿಷಯ ಹೇಳುತ್ತೇನೆ. ಗಂಗ ಚಿನ್ನದಂತಹ ಹುಡುಗಿ. ದೇವರು ರೂಪು, ಗುಣ, ವಿದ್ಯೆ ಎಲ್ಲ ನನ್ನೂ ಕೊಟ್ಟಿದ್ದಾನೆ. ಆದರೆ ಒಂದೇ ಒಂದು ವಿಷಯದಲ್ಲಿ ಅವಳಿಗೆ ಅನ್ಯಾಯವಾಗಿದೆ. ಅದೇನೆಂದು ನಿನಗೆ ತಿಳಿದೇ ಇದೆ. ಅವಳು ನಿನ್ನನ್ನು ಮದುವೆಯಾದರೆ ಖಂಡಿತವಾಗಿ ಸುಖವಾಗಿರುವಳೆಂದು ನಾನು ಧೈರ್ಯವಾಗಿ ಹೇಳಬಲ್ಲೆ. ಆದರೆ ....ಅವಳನ್ನು ಮದುವೆಯಾದ ಮೇಲೆ....'ಕುಂಟಿಯನ್ನು ಕಟ್ಟಿಕೊಂಡೆನಲ್ಲಾ !' ಎಂದು ನೀನು ಯಾವ ವಿಷಗಳಿಗೆಯಲ್ಲೂ ದುಃಖಿಸಬಾರದು...."

"ಗಂಗ ನನ್ನನ್ನು ಮದುವೆಯಾಗಲು ಒಪ್ಪಿಕೊಂಡರೆ ನಾನು ಈ ಪ್ರಪಂಚದಲ್ಲೆಲ್ಲ ಅತ್ಯಂತ ಸುಖಿ ಅನಂತು....ಅತ್ಯಂತ ಸುಖಿ...."

ವಿಶ್ವ ಉದ್ವೇಗಗೊಂಡು ಹೇಳಿದ. ಅವನ ವಿಶಾಲವಾದ ಕಣ್ಣುಗಳು ದೇವರ ಮುಂದೆ ಉರಿಯುವ ಎರಡು ದೀಪಗಳಂತೆ ಪ್ರಜ್ವಲಿಸುತ್ತಿದ್ದವು.

* * * *

ಶೃಂಗರಿಸಿಕೊಂಡು ರೂಮಿನ ಬಾಗಿಲ ಬಳಿ ನಿಂತುಕೊಂಡಿದ್ದ ಗಂಗೆಯ ದೃಷ್ಟಿ ಹಾಸ್ಟಲ್ಲಿನ ದೊಡ್ಡ ಗೇಟಿನ ಮೇಲಿತ್ತು. ಅದೇ ತಾನೆ ಕಾಲೇಜಿನಿಂದ ಬಂದಿದ್ದ ಮಾಲತಿ ಗಂಗೆಯನ್ನು ನೋಡಿ ಅವಳ ಬೆನ್ನ ಹಿಂದೆ ನಿಂತು ಸಣ್ಣದಾಗಿ ಸಿಳ್ಳು ಹಾಕಿದಳು.

"ಯಾರು ? ಓ ! ನೀನಾ ಮಾಲತಿ...."

"ಇನ್ಯಾರೂಂತಿದ್ದೆ ? ವಿಶ್ವನಾಥ ಅಂತ ಸಂಭ್ರಮದಿಂದ ಹಿಂತಿರುಗಿ ನೋಡಿದೆಯೇನೊ....?"

"ಇಲ್ಲಾಮ್ಮಾ...." ಗಂಗ ತಲೆತಗ್ಗಿಸಿ ನವ ವಧುವಿನಂತೆ ನಾಚಿಕೊಂಡಳು.

ಮಾಲತಿ ಗಂಗೆಯ ಮುಂದೆ ನಿಂತುಕೊಂಡು ಅವಳ ಶೃಂಗಾರ ಹಾಗೂ ಸೌಂದರ್ಯವನ್ನು ಅವಲೋಕಿಸಿದಳು. ರಕ್ತವರ್ಣದ ಮೈಸೂರು ಜಾರ್ಜೆಟ್ ಸೀರೆ

ಅವಳ ಹಾಲು ಬಣ್ಣದ ಮೈ ಬಣ್ಣವನ್ನು ಎತ್ತಿ ಹಿಡಿದು ತೋರಿಸುತ್ತಿತ್ತು. ಅವಳ ದುಂಡು ತೋಳುಗಳನ್ನು ಅಪ್ಪಿ ಹಿಡಿದಿದ್ದ ಕಪ್ಪು ಮಕಮಲ್ ರವಿಕೆ ಆ ರಕ್ತವರ್ಣದ ಸೀರೆಗೆ ಹೊಂದಾಣಿಕೆಯಾಗಿತ್ತು. ಅವಳ ಕೈಯಲ್ಲಿ ತೂಗಾಡುತ್ತಿದ್ದ ಕೆಂಪು ಬಣ್ಣದ ಶೋಕಿ ಚೀಲದಿಂದ ಸೆಂಟಿನ ವಾಸನೆ ಮೂಗಿನ ಸೆಲೆ ಒಡೆಸುವಂತಿತ್ತು.

ದೈವದತ್ತವಾಗಿ ಬಂದ ಗಂಗಳ ಸೌಂದರ್ಯ....ಆ ಸೌಂದರ್ಯವನ್ನು ನೋಡಿ ಮಾಲತಿಗೆ ಕ್ಷಣಕಾಲ ಕಣ್ಣು ಮುಚ್ಚುವಂತಾಯಿತು.

"ಗಂಗ....ಧರೆಗಿಳಿದು ಬಂದಿರುವ ಗಂಗಾದೇವಿಯೇ....ಈ ರಕ್ತವರ್ಣದ ಸೀರೆ....ಅದಕ್ಕೊಪ್ಪುವ ಕಪ್ಪು ಮಕಮಲ್ ರವಿಕೆ....ಹಾಲಿಗೆ ಕೇಸರಿ ಬೆರೆಸಿದಂತಿರುವ ಹಾಲುಗೆನ್ನೆ....ಕೆಂಪು ತುಟಿ....ಆ ತುಟಿಯ ಕೆಳಗಿರುವ ಕಪ್ಪು ಚುಕ್ಕಿ.... ಒಂದೇ....ಎರಡೇ....ಯಾರಿಗಾಗಿ ಈ ಸೌಂದರ್ಯ....ಯಾರಿಗಾಗಿ ಈ ಅಲಂಕಾರ ?" ಮಾಲತಿ ನಾಟಕೀಯವಾಗಿ ಗಂಗಳ ಸೌಂದರ್ಯದ ವರ್ಣನೆಯನ್ನು ಮಾಡಿದಳು.

"ಮಾಲತಿ....ಕವಿತೆಗಳನ್ನು ಬರೆಯುವ ದುರಭ್ಯಾಸ ನಿನಗೂ ಉಂಟೋ?"

"ಆ ದುರಭ್ಯಾಸ ನನಗಿಲ್ಲದಿದ್ದರೂ, ಸುಂದರವಾದ ವಸ್ತುವನ್ನು ನೋಡಿದರೆ ಅದನ್ನು ಕಣ್ಣುತುಂಬ ನೋಡಿ, ಬಾಯಿತುಂಬ ಹೊಗಳಿ ಹಾಡೋಣ ಎಂದೆನಿಸುತ್ತದೆ. ಅಂದಹಾಗೆ, ನೀನು ಈಗ ಎಲ್ಲಿಗೆ ಹೊರಟಿರೋದು ?"

"ವಸ್ತುಪ್ರದರ್ಶನಕ್ಕೆ ಹೋಗೋಣಾಂತ...."

"ವಿಶ್ವನಾಥನ ಸಂಗಡ ತಾನೆ....?"

ಆ ಸಮಯಕ್ಕೆ ಸರಿಯಾಗಿ ವಿಶ್ವನಾಥನೇ ಗಂಗೆಯ ಕಣ್ಣಿಗೆ ಕಾಣಿಸಿಕೊಂಡ. ದೂರದಲ್ಲಿ ನಡೆದು ಬರುತ್ತಿದ್ದ ವಿಶ್ವನಾಥನನ್ನು ನೋಡಿದ ಕೂಡಲೇ ಅರಳಿದ ಹೂವಿನತ್ತ ಹಾರಿಹೋಗುವ ದುಂಬಿಯಂತೆ ಗಂಗ ಮುಂದೆ ಹೆಜ್ಜೆ ಇಟ್ಟಳು.

"ನಾನು ಬರ್ತೀನಿ ಮಾಲತಿ....ಬರೋದು ರಾತ್ರಿ ಹೊತ್ತಾಗುತ್ತದೆ ಎಂದು ಅಡಿಗೆಯವರಿಗೆ ತಿಳಿಸಿಬಿಡು...."

* * * *

ಗಂಗ ಮಾಲತಿಗೆ ಕೈ ಬೀಸಿ ವಿಶ್ವನ ಕಡೆ ಹೆಜ್ಜೆ ಹಾಕಿದಳು. ಶೃಂಗರಿಸಿಕೊಂಡು ತನ್ನ ಸಮೀಪಕ್ಕೆ ನಿಧಾನವಾಗಿ ನಡೆದುಬರುತ್ತಿದ್ದ ಗಂಗೆಯನ್ನೇ ನೋಡುತ್ತಿದ್ದ ವಿಶ್ವ ಆಶ್ಚರ್ಯದಿಂದ ಕಣ್ಣರಳಿಸಿದ. ಅತ್ಯಂತ ಸರಳವಾದ ಉಡುಪಿನಲ್ಲಿ ಹೆಚ್ಚು ಅಲಂಕಾರವಿಲ್ಲದೆ ಕಾಲೇಜಿಗೆ ಬರುತ್ತಿದ್ದ ಗಂಗಳನ್ನು ನಾಲ್ಕು ವರ್ಷದಿಂದಲೂ ನೋಡುತ್ತಿದ್ದ. ಸಾಧಾರಣವಾಗಿ ಅವಳುಡುತ್ತಿದ್ದ ಬಿಳಿಯ

ವಾಯಲ್ ಸೀರೆಗಳಲ್ಲಿಯೇ ಮನಮೋಹಕವಾಗಿ ಕಾಣಿಸುತ್ತಿದ್ದ ಗಂಗೆಯನ್ನು ಅವನು ಮನಸಾರೆ ಮೆಚ್ಚಿಕೊಂಡಿದ್ದ.

ಆದರೆ ಈ ಶೃಂಗಾರ ? ತನಗಾಗಿರಬಹುದೆ ?

ಕುಂಟುತ್ತಾ ನಡೆದು ಬರುತ್ತಿದ್ದ ಗಂಗಳ ದೇಹ ಬೀಸುವ ಗಾಳಿಗೆ ಅತ್ತಿತ್ತ ತೂಗಾಡುವ ಅರಳಿದ ಕೆಂಪು ಗುಲಾಬಿ ಹೂವನ್ನು ನೋಡಿದಂತೆ ವಿಶ್ವನಿಗೆ ಭಾಸವಾಯಿತು.

"ಅನಂತೂ ಬರಲಿಲ್ಲವೇನು ?"

ಒಂಟಿಯಾಗಿ ಸೂಟು ಧರಿಸಿ ನಿಂತಿದ್ದ ವಿಶ್ವನನ್ನು ಗಂಗ ಕೇಳಿದಳು.

" 'ನನಗೆ ತುಂಬಾ ತಲೆ ನೋವು, ನೀವಿಬ್ಬರೇ ಹೋಗಿ ಬನ್ನಿ' ಎಂದು ಹೇಳಿದ. ನನ್ನೊಡನೆ ವಸ್ತುಪ್ರದರ್ಶನಕ್ಕೆ ಬರಲು ನಿಮಗೆ ಸಂಕೋಚವೇನು ?"

ಗಂಗೆಯ ಕಪ್ಪು ಮಕಮಲ್ ರವಿಕೆಯ ಮೇಲೆ ಎದ್ದು ಕಾಣಿಸುತ್ತಿದ್ದ ಎರಡೆಳೆಯ ಮುತ್ತಿನ ಸರವನ್ನೇ ನೋಡುತ್ತಾ ಕೇಳಿದ ವಿಶ್ವನ ಮಾತಿಗೆ ಗಂಗ ತಲೆಯಾಡಿಸಿದಳು.

"ಇಲ್ಲ....ಆದರೂ ಅನಂತು ಬಂದಿದ್ದರೆ ಚೆನ್ನಾಗಿತ್ತು...."

ಅನಂತು ಅವರಿಬ್ಬರ ನಡುವೆ ಹೋಗಬಾರದೆಂದೇ ತಪ್ಪಿಸಿಕೊಂಡಿದ್ದ. ಅವರಿಬ್ಬರನ್ನೂ ಸಾಕಷ್ಟು ಬೆಸೆದಿರುವ ಸ್ನೇಹಲತೆ ಮತ್ತಷ್ಟು ಬೆಳೆದು ಬೇಗ ಶುಭಕಾರ್ಯದಲ್ಲಿ ಮುಕ್ತಾಯಗೊಳ್ಳಲಿ ಎಂದು ಅನಂತು ಮನಸ್ಸಿನಲ್ಲೇ ಲೆಕ್ಕ ಹಾಕುತ್ತಿದ್ದ.

ಅರ್ಧ ಗಂಟೆ ವಸ್ತುಪ್ರದರ್ಶನದಲ್ಲಿ ಓಡಾಡುವುದರಲ್ಲಿ ಗಂಗೆಗೆ ಸುಸ್ತಾಯಿತು. ಅವಳ ನಡಗೆ ನಿಧಾನವಾದದ್ದನ್ನು ನೋಡಿ ವಿಶ್ವನಾಥ ಕಾರಣವನ್ನು ಊಹಿಸಿದ.

"ಹುಲ್ಲಿನ ಮೇಲೆ ಸ್ವಲ್ಪಹೊತ್ತು ಕುಳಿತುಕೊಂಡು ಹರಟೋಣವೆ ?"

"ನಾನೂ ಅದೇ ಹೇಳೋಣಾಂತ ಇದ್ದೆ...."

ಇಬ್ಬರೂ ಸೊಂಪಾಗಿ ಬೆಳೆದು ನೆಲದ ಮಣ್ಣನ್ನೆಲ್ಲಾ ಮುಚ್ಚಿಕೊಂಡಿದ್ದ ಹಸಿರು ಹುಲ್ಲಿನ ಮೇಲೆ ಎದಿರು ಬದಿರಾಗಿ ಕುಳಿತುಕೊಂಡರು. ಸಮೀಪದಲ್ಲಿದ್ದ ದೀಪದ ಬೆಳಕು ಗಂಗಳ ದುಂಡು ಮುಖದ ತುಂಬಾ ಬಿದ್ದು ಅವಳ ಮುಖದ ಅಂದ ಚೆಂದಗಳನ್ನು ಹೀರಲು ವಿಶ್ವನಾಥನಿಗೆ ಅನುಕೂಲ ಮಾಡಿಕೊಟ್ಟಿತು.

"ಮುಂದೆ ನೀವು ಏನು ಮಾಡಬೇಕೂಂತಿದೀರಾ ?" ವಿಶ್ವನಾಥ ಮಾತಿಗೆ ಪೀಠಿಕೆ ಹಾಕಿದ.

"ವಿದ್ಯಾಭ್ಯಾಸವನ್ನು ಮುಗಿಸಿ ನಾನು ವೈದ್ಯಳಾದ ಮೇಲೆ ತಾನೆ ಆ ಪ್ರಶ್ನೆ...."

"ಅದೇನೂ ಬಹಳ ದೂರವಿಲ್ಲ. ಇನ್ನೊಂದು ವರ್ಷಕ್ಕೆ ಸರಿಯಾಗಿ ನೀವು ವೈದ್ಯರಾಗುತ್ತೀರಿ ಅಲ್ಲವೆ ?"

"ಮಂಡ್ಯದಲ್ಲೇ ಖಾಸಗಿಯಾಗಿ ಔಷಧಾಲಯವನ್ನು ತೆಗೆಯಲೆಂದು ನನ್ನ ತಂದೆ ಅಭಿಪ್ರಾಯಪಡುತ್ತಾರೆ. ನನ್ನನ್ನು ಒಂಟಿಯಾಗಿ ದೂರ ಕಳುಹಿಸಲು ಅವರಿಗೆ ಸ್ವಲ್ಪವೂ ಇಷ್ಟವಿಲ್ಲ...."

"ಮದುವೆಯಾದ ಮೇಲೂ ನೀವು ಮಂಡ್ಯದಲ್ಲೇ ಇರುತ್ತೀರೇನು ?"

"ಮದುವೆ ! ಯಾರಿಗೆ ?"

"ನಿಮ್ಮ ಮದುವೆ....ಯಾಕೆ ಮದುವೆಯಾಗುವುದಿಲ್ಲವೆಂದು ನೀವು ನಿರ್ಧರಿಸಿ ಕೊಂಡಿರುವಂತಿದೆ."

"ನನ್ನ ಮದುವೆ ಈ ಜನ್ಮದಲ್ಲಿ ಆಗಲಾರದು...."

"ಯಾಕೆ ಈ ರೀತಿ ಮಾತನಾಡುತ್ತಿದ್ದೀರಾ ? ನೀವು ಅಪೇಕ್ಷೆಪಟ್ಟರೆ ಸರಿಯಾದ ಹುಡುಗನೊಬ್ಬನನ್ನು ಕೈ ಹಿಡಿದು ಸುಖವಾಗಿರಬಹುದು...."

"ವಿಶ್ವನಾಥ್....ನನ್ನ ತಹ ಅಂಗಹೀನೆಯನ್ನು ಯಾರು ಮದುವೆ ಯಾಗುತ್ತಾರೆ ?"

"ನಿಮ್ಮನ್ನು ಮದುವೆಯಾಗಬೇಕಾದರೆ ಅವನು ಖಂಡಿತವಾಗಿ ಅದೃಷ್ಟ ಶಾಲಿ...."

"ಆ ಅದೃಷ್ಟಶಾಲಿ ನನಗಿನ್ನೂ ಸಿಕ್ಕಿಲ್ಲ."

ಗಂಗ ನಗುತ್ತಾ ತಲೆ ಎತ್ತಿ ವಿಶ್ವನಾಥನನ್ನು ನೋಡಿದಳು. ದೀಪದ ಬೆಳಕಿಗೆ ಬೆನ್ನುಮಾಡಿಕೊಂಡು ಕುಳಿತಿದ್ದ ವಿಶ್ವನಾಥನ ಮುಖದ ಮೇಲೆ ಆ ಸನ್ನಿವೇಶದಲ್ಲಿ ಕಂಡ ಭಾವಗಳು ಗಂಗೆಗೆ ಕಾಣಿಸಲಿಲ್ಲ.

"ಗಂಗ...."

ವಿಶ್ವನಾಥ ಹುಲ್ಲಿನ ಮೇಲೆ ಸರಿದಾಡುತ್ತಿದ್ದ ಗಂಗೆಯ ಕೈಯನ್ನು ಹಿಡಿದುಕೊಂಡ. ಭೀತಿಯಿಂದಾಗಲೀ, ಜುಗುಪ್ಸೆಯಿಂದಾಗಲಿ ಗಂಗ ತನ್ನ ಕೈಯನ್ನು ಅವನ ಹಿಡಿಯೊಳಗಿಂದ ಹಿಂದಕ್ಕೆ ಎಳೆದುಕೊಳ್ಳಲಿಲ್ಲ.

ಅವಳು ಕತ್ತಲಿನಲ್ಲಿಯೂ ಹೊಳೆಯುತ್ತಿದ್ದ ವಿಶ್ವನಾಥನ ಕಣ್ಣುಗಳನ್ನೇ ನೋಡುತ್ತಾ ಕುಳಿತುಕೊಂಡಿದ್ದಳು.

ವಿಶ್ವನಾಥನ ಪರಿಚಯ ನಾಲ್ಕು ವರ್ಷಗಳಿಂದ ಗಂಗಳಿಗಿತ್ತು. ಆದರೂ ಒಂದು ಸಲವೂ ಅವನು ಅವಳನ್ನು ಹೆಸರಿಡಿದು ಕರೆದಿರಲಿಲ್ಲ.

"ಗಂಗ...." ಆ ಎರಡಕ್ಷರದ ಹೆಸರಿನಲ್ಲಿ ಎಂತಹ ಮಾಧುರ್ಯವಿದೆ! ಕಲ್ಲು ಸಕ್ಕರೆಯ ಚೂರನ್ನು ನಾಲಿಗೆಯ ಮೇಲೆ ಹೊರಳಿಸುತ್ತಾ ಅದರ ಸಿಹಿಯನ್ನು ಸವಿದು ಚಪ್ಪರಿಸುವಂತೆ ವಿಶ್ವನಾಥ ಮತ್ತೆ ಗಂಗೆಯನ್ನು ಹೆಸರಿಟ್ಟು ಕರೆದ. ಅವನ ಎದುರಿನಲ್ಲಿ ಅಪ್ಸರೆಯಂತೆ ಕುಳಿತಿದ್ದರೂ, ಮೊದಲನೆಯ ಕರೆ ಅವಳಿಗೆ ಕೇಳಿಸಿದರೂ ಮತ್ತೆ ಆ ಹೆಸರನ್ನು ವಿಶ್ವನಿಗೆ ಹೇಳಬೇಕೆನಿಸಿತು.

"ಏನು....?" ಕತ್ತು ಕೊಂಕಿಸಿ ಕೇಳಿದಳು ಗಂಗ.

"ನನ್ನನ್ನು ಮದುವೆಯಾಗಿ, ನನ್ನ ಬಾಳಿನಲ್ಲಿ ಬೆಳಕಾಗಿ ಬರಲು ನಿನಗೆ ಒಪ್ಪಿಗೆ ಇದೆಯೆ ಗಂಗ?" ಇದ್ದಕ್ಕಿದ್ದಂತೆ ವಿಶ್ವನಾಥ ಏಕವಚನದಲ್ಲಿ ಗಂಗಳೊಡನೆ ಮಾತು ಪ್ರಾರಂಭಿಸಿದ.

ವಿಶ್ವನಾಥ ಆ ಪ್ರಶ್ನೆ ಹಾಕಿದಾಗ ಅವನ ಒರಟು ಕೈಯೊಳಗಿದ್ದ ಕೋಮಲವಾದ ಹೆಣ್ಣು ಕೈ ಕಂಪಿಸಿತು. ಅವನು ಹಿಡಿತವನ್ನು ಬಿಗಿಗೊಳಿಸಿ ಅದರ ನಡುಗುವಿಕೆಯನ್ನು ಹಿಡಿದು ನಿಲ್ಲಿಸಿದ.

"ನೀವು ನನ್ನೊಡನೆ ತಮಾಷಿ ಮಾಡುತ್ತಿಲ್ಲ ತಾನೆ?"

ಗಂಗ ಒಂದು ನಿಮಿಷ ಸುಮ್ಮನೆ ಕುಳಿತಿದ್ದು ಆ ಮೇಲೆ ವಿಶ್ವನ ಪ್ರಶ್ನೆಗೆ ಉತ್ತರ ಕೊಡುವ ಮನಸ್ಸು ಮಾಡಿದಳು.

ವಿಶ್ವನ ಪ್ರಶ್ನೆ ಗಂಗಳಿಗೆ ಅನಿರೀಕ್ಷಿತವಾಗಿತ್ತು. ಕುಂಟಿಯಾದ ತನ್ನನ್ನು ಯಾರೂ ಮುಂದೆ ಬಂದು ಮದುವೆಯಾಗುವುದಿಲ್ಲವೆಂದು ಧೃಢವಾಗಿ ನಂಬಿಕೊಂಡಿದ್ದ ಗಂಗೆ ತನ್ನ ಮದುವೆಯ ವಿಷಯವನ್ನೇ ಮರೆತುಬಿಟ್ಟಿದ್ದಳು. ವೈದ್ಯಳಾಗಿ ಜನಸೇವೆ ಮಾಡುವುದರಲ್ಲಿ ದೇಹವನ್ನು ಸವೆಸಬೇಕೆಂದು ಅವಳು ನಿರ್ಧರಿಸಿಕೊಂಡಿದ್ದರೂ ಎಲ್ಲ ಹೆಣ್ಣು ಮಕ್ಕಳಂತೆ ಮದುವೆಯಾಗಿ, ಗೃಹಿಣಿಯಾಗಿ, ತಾಯಿಯಾಗಿ ಬಾಳ್ವೆ ಮಾಡಬೇಕೆಂದು ಅವಳ ಅಂತರಂಗ ಕೂಗಿ ಹೇಳುತ್ತಿತ್ತು. ಅದರ ಕರೆಗೆ 'ಓ'ಗೊಡುವಷ್ಟು ಧೈರ್ಯ ಗಂಗೆಗಿರಲಿಲ್ಲ.

ನೋಡಲು ಲಕ್ಷಣವಾಗಿರುವ, ಆರೋಗ್ಯದ ಪ್ರತಿರೂಪದಂತಿರುವ, ತಂದೆಯ ಒಬ್ಬನೇ ಮಗನಾಗಿರುವ ಶ್ರೀಮಂತ ಮನೆತನಕ್ಕೆ ಸೇರಿದ ವಿಶ್ವ ತನ್ನನ್ನು ಮದುವೆಯಾಗ ಬಯಸುವನೆ?

ಗಂಗ ಕ್ಷಣ ಕಾಲ ದಿಗ್ಭ್ರಮೆಯಿಂದ ಬೆಪ್ಪಾಗಿ ಕುಳಿತುಕೊಂಡಳು.

ಬಹಳ ವರ್ಷಗಳಿಂದಲೂ ಕತ್ತಲೆಯ ಕೋಣೆಯಲ್ಲಿ ಕೊಳೆಯುತ್ತಿದ್ದವ

ನನ್ನು ಸೂರ್ಯನ ಮುಂದೆ ತಂದು ನಿಲ್ಲಿಸಿದಂತಾಯಿತು ಗಂಗೆಯ ಆಗಿನ ಸ್ಥಿತಿ. ಅನಿರೀಕ್ಷಿತವಾಗಿ ಒದಗಿ ಬಂದ ಸಂತೋಷದ ಸಂದರ್ಭವನ್ನು ಯಾವ ರೀತಿ ಎದುರಿಸಬೇಕೆಂಬುದೇ ಅವಳಿಗೆ ತಿಳಿಯಲಿಲ್ಲ.

"ಮದುವೆಯ ವಿಷಯದಲ್ಲಿ ಯಾರಾದರೂ ತಮಾಷೆ ಮಾಡುತ್ತಾರೆಯೆ ಗಂಗ? ಈ ವಿಷಯದಲ್ಲಿ ನಿನ್ನ ಅಭಿಪ್ರಾಯವನ್ನು ತಿಳಿದುಕೊಳ್ಳೋಣ ಎನಿಸಿತು."

"ನಾನು ಕುಂಟಿ ಎನ್ನುವ ವಿಷಯ ನಿಮಗೆ ಗೊತ್ತಿದೆ. ಈ ವಿಷಯ ತಿಳಿದೂ ನೀವು ನನ್ನನ್ನು ಮದುವೆಯಾಗಲು ಇಷ್ಟಪಡುತ್ತೀರಾ?"

"ನಾನು ಮದುವೆಯಾಗುವುದು ಕುಂಟಿಯನ್ನಲ್ಲ....ಗಂಗಳನ್ನು ನಾನು ಕೈ ಹಿಡಿದರೆ ನನ್ನ ಬದುಕು ಬಂಗಾರವಾಗುವುದು...."

"ಬಹಳ ದೊಡ್ಡ ಮಾತಾಯಿತು. ನಿಮ್ಮನ್ನು ಕೈ ಹಿಡಿದರೆ ನನ್ನ ಬದುಕು ಸಾರ್ಥಕವಾಗುವುದು...."

"ಅಂದರೆ....ನನ್ನ ಕೈ ಹಿಡಿಯಲು ನಿನ್ನ ಒಪ್ಪಿಗೆ ಇದೆ ಎಂದು ಅರ್ಥವಾದ ಹಾಗೆ ಅಲ್ಲವೆ?"

ಗಂಗ ತಲೆ ತಗ್ಗಿಸಿ ಕುಳಿತುಕೊಂಡಳು. ನವವಧುವಿನಂತೆ ನಾಚಿ ಕುಳಿತು ಕೊಂಡಿರುವ ಗಂಗೆಯ ಸೌಂದರ್ಯವನ್ನು ನೋಡುತ್ತಿದ್ದ ವಿಶ್ವ ಮೈಮರೆತ. ಬಹಳ ದಿವಸಗಳಿಂದ ವಿಶ್ವನನ್ನು ಹಿಡಿದು ಕಾಡುತ್ತಿದ್ದ ಸಮಸ್ಯೆ ಆ ದಿನ ಬಗೆಹರಿದಂತಾಯಿತು.

* * * *

ಗಂಗ ತನ್ನ ಮದುವೆಯ ವಿಷಯವನ್ನು ತಂದೆ ತಾಯಿಗಳಿಂದ ಬಚ್ಚಿಟ್ಟಳು. ಮೈಸೂರಿನಲ್ಲಿ ಬೇಕಾದ ಕಡೆಗಳಿಗೆಲ್ಲಾ ವಿಶ್ವನ ಸಂಗಡ ಧೈರ್ಯವಾಗಿ ಹೋಗಿ ಬರುತ್ತಿದ್ದಳು. ದೊಡ್ಡ ನಿರಾಶೆಯ ಬುತ್ತಿಯನ್ನು ಹೆಗಲ ಮೇಲೆ ಹೊತ್ತು ಕೊಂಡಿದ್ದರೂ ವಿಶ್ವನಾಥನ ಸಹವಾಸದಿಂದ ಗಂಗೆಯ ಬಾಳು ಬೆಳಕನ್ನು ಕಂಡು ಕೊಂಡಿತು. ಚಿಂತೆಯ ಗಂಟನ್ನು ಹೊತ್ತವಳಂತಿರುತ್ತಿದ್ದ ಗಂಗೆಯ ಮುಖ ಈಗ ಮಂದಹಾಸ ಚಿಮ್ಮಿಸುತ್ತಿತ್ತು. ಕಾಲೇಜಿನಲ್ಲಿ ಭೇಟಿಯಾಗಿ ಇಬ್ಬರೂ ಗಂಟೆಗಟ್ಟಲೆ ಹರಟೆ ಹೊಡೆಯುತ್ತಿದ್ದರು. ಅವರಿವರು ಏನನ್ನುವರೊ ಎಂಬ ಭೀತಿ ಅವರಿಬ್ಬರಿಂದ ದೂರ ಸರಿದು ಹೋಯಿತು.

ಭವಿಷ್ಯದ ಬದುಕನ್ನು ನಿರ್ಧರಿಸಿಕೊಂಡ ಮೇಲೆ ವಿಶ್ವನಾಥ ನಿಶ್ಚಿಂತನಾದ. ಮುಂದಿನ ಸುಖದ ಬದುಕನ್ನು ಕಲ್ಪಿಸಿಕೊಳ್ಳುತ್ತಾ ಇಂದಿನ ನೀರಸ ದಿನಗಳನ್ನು ಗಂಗ ಮರೆಯಲು ಪ್ರಯತ್ನಿಸುತ್ತಿದ್ದಳು.

ಆಸ್ಪತ್ರೆಯ ದೊಡ್ಡ ಗೇಟಿನ ಬಳಿಯಲ್ಲಿ ವಿಶ್ವ ಗಂಗಳನ್ನು ಒಂದು ದಿನ

ದೂರದಿಂದಲೇ ನೋಡಿದ. ನಿಧಾನವಾಗಿ ಕುಂಟುತ್ತಾ ಮುಂದೆ ಸಾಗುತ್ತಿದ್ದ ಅವಳನ್ನು ಸಮೀಪಿಸುವುದು ಅವನಿಗೆ ಕಷ್ಟವಾಗಲಿಲ್ಲ.

"ನಮಸ್ಕಾರ...." ವಿನಯಪೂರ್ವಕವಾಗಿ ಗಂಗೆಗೆ ಕೈಜೋಡಿಸಿ ನಿಂತ ವಿಶ್ವ

"ಇದೇನು ಇವತ್ತು ತುಂಬಾ ಖುಷೀ ಮೇಲಿರೋ ಹಾಗಿದೆ ರಾಯರು ?"

"ಅಪ್ನೋರು ಚಾಮುಂಡಿಬೆಟ್ಟಕ್ಕೆ ಬರ್ತೀರಾ ಅಂತ ರಾಯರು ಕೇಳ್ತಿದಾರೆ?"

"ನಾನು ಬೆಟ್ಟ ಹತ್ತಲಾರೆ ವಿಶ್ವನಾಥಾ...."

"ಟ್ಯಾಕ್ಸಿ ಮಾಡಿಕೊಂಡು ಹೋಗೋಣ, ಅನಂತೂನೂ ಬರ್ತಾನೆ. ಅವನೇ ಮೊದಲು ಬೆಟ್ಟಕ್ಕೆ ಹೋಗೋಣವೆಂದು ಹೇಳಿದ. ನಾನೂ ಬೆಟ್ಟವನ್ನು ಹತ್ತಲಾರೆ."

"ನಾನಂತೂ ಬೆಟ್ಟದ ಸಾವಿರ ಮೆಟ್ಟಲುಗಳನ್ನು ಹತ್ತಲಾರೆ. ಆದರೆ ನಿಮಗೇನು ಧಾಡಿ ಬಂದಿರೋದು ?"

"ಈ ಗುಡಾಣದಂತಹ ದೇಹವನ್ನು ಆದಷ್ಟೂ ಸುಖವಾಗಿಟ್ಟಿರಬೇಕೆಂದು ಮನಸ್ಸು ಮಾಡಿಬಿಟ್ಟಿದ್ದೇನೆ. ಅನಾವಶ್ಯಕವಾಗಿ ಯಾಕೆ ಕಷ್ಟಪಡಬೇಕೂಂತ ? ಹತ್ತು ರೂಪಾಯಿ ಬಿಸಾಕಿದರೆ ಟ್ಯಾಕ್ಸಿಯವನು ಬರ್ತಾನೆ...."

"ಬಿಸಾಕುವಷ್ಟು ಹಣ ನಿಮ್ಮಲ್ಲಿದ್ದರೆ ನನಗೆ ಸ್ವಲ್ಪ ಕೊಡ್ತೀರಾ ?"

"ಹಣ ತುಂಬಾ ಇದ್ದರೆ ನಿನ್ನ ಮುಂದೆ ಬಿಸಾಕಬಹುದಾಗಿತ್ತು. ಆದರೆ ಅಷ್ಟು ಹಣ ನಮ್ಮಪ್ಪ ನನಗೆ ಕೊಡೋದಿಲ್ಲ ಗಂಗ....ಬರ್ತೀಯಾ ತಾನೆ? ನಾಳೆ ಬೆಳಗ್ಗೆ ಎಂಟು ಗಂಟೆಗೆ ಸರಿಯಾಗಿ ನಾವು ಟ್ಯಾಕ್ಸಿ ಮಾಡಿಕೊಂಡು ಹಾಸ್ಟಲ್ಲಿಗೇ ಬಂದುಬಿಡ್ತೇವೆ...."

ಆಕಾಶ ನೀಲಿ ಬಣ್ಣದ ನೈಲಾನ್ ಸೀರೆಯುಟ್ಟಿದ್ದ ಗಂಗಳ ತೆಳ್ಳನೆಯ ಶರೀರ ಬೆಟ್ಟದ ಮೇಲೆ ಬೀಸುತ್ತಿದ್ದ ಕೊರೆಯುವ ಚಳಿಗಾಳಿಗೆ ನಡುಗುತ್ತಿರುವು ದನ್ನುಗಮನಿಸಿದ ವಿಶ್ವ "ತುಂಬಾ ಚಳಿಯಾಗುತ್ತೇನು? ನನ್ನ ಕೋಟು ಕೊಡಲೆ?"

"ಬೇಡ...." ಚಳಿಯಿಂದ ಮೈ ನಡುಗುತ್ತಿದ್ದರೂ ಅನಂತು ಎದುರಿನಲ್ಲಿ ವಿಶ್ವನಿಂದ ಕೋಟನ್ನು ತೆಗೆದುಕೊಂಡು ಹಾಕಿಕೊಳ್ಳಲು ಗಂಗ ಸಂಕೋಚಪಟ್ಟಳು. ದೇಹದ ಒಳಭಾಗವನ್ನು ಬೆಚ್ಚಗಿಡಲು ತನಗೆ ತಿಳಿದಿದ್ದ ಒಂದೇ ಒಂದು ದಾರಿ ಯನ್ನು ವಿಶ್ವನಾಥ ಅನುಸರಿಸಿದ.

ಅವನ ಕೈ ಯಾಂತ್ರಿಕವಾಗಿ ಜೇಬಿನೊಳಗಿಳಿದು ಸಿಗರೇಟನ್ನು ಹೊರಗೆ ಎಳೆಯಿತು. ಅದಕ್ಕೆ ವಿಶ್ವ ಬೆಂಕಿಯನ್ನು ತಗಲಿಸಿ ಹೊಗೆಯಾಡುವಂತೆ ಮಾಡಿದ.

"ನೀವು ಬಹಳ ಸಿಗರೇಟನ್ನು ಸೇದುತ್ತೀರೇನು ?" ಗಂಗ ಕುತೂಹಲದಿಂದ ವಿಶ್ವನನ್ನು ಕೇಳಿದಳು.

"ಹೆಚ್ಚೇನೂ ಇಲ್ಲ ಗಂಗ....ದಿನಕ್ಕೆ ಎರಡು ಪ್ಯಾಕ್ ಅಷ್ಟೆ...."

ಅನಂತು ನಡುವೆ ಬಾಯಿ ಹಾಕಿ ವಿಶ್ವನಿಗೆ ಬದಲು ತಾನೇ ಉತ್ತರ ಕೊಟ್ಟ.

"ಅಬ್ಬಾ ! ಎರಡು ಪ್ಯಾಕ್ ಸಿಗರೇಟನ್ನು ಒಂದು ದಿನದಲ್ಲಿ ಬೂದಿಮಾಡಿ ಬಿಡುತ್ತೀಯಾ ?"

"ಸಿಗರೇಟೆಂದರೆ ನನಗೆ ಬದ್ಧದ್ವೇಷ ! ಅದಕ್ಕೇ ಕಂಡಾಗಲೆಲ್ಲಾ ಅವುಗಳನ್ನು ಕೊಂಡುಕೊಂಡು ಬೆಂಕಿ ಹತ್ತಿಸಿ ಭಸ್ಮಮಾಡಿಬಿಡುತ್ತೇನೆ...."

ವಿಶ್ವನ ಮಾತು ಕೇಳಿ ಗಂಗ ನಕ್ಕಳು.

"ನಿಮ್ಮ ಆರೋಗ್ಯಕ್ಕೆ ಸಿಗರೇಟು ಒಳ್ಳೆಯದಲ್ಲ. ಹಾಳು ಈ ಕೆಟ್ಟ ಅಭ್ಯಾಸವನ್ನು ಬಿಟ್ಟುಬಿಡಬಾರದೆ ?"

"ಗಂಗ....ವೈದ್ಯರಾಗುವುದಕ್ಕಿಂತ ಮುಂಚೆಯೇ ಈ ರೀತಿ ಇತರರಿಗೆ ಆರೋಗ್ಯದ ವಿಷಯವಾಗಿ ಉಪನ್ಯಾಸ ಕೊಡಲು ಪ್ರಾರಂಭಿಸಿಬಿಟ್ಟರೆ ಇನ್ನು ನೀವು ವೈದ್ಯರಾದಮೇಲೆ ಗತಿ ಏನು ಅಂತೀನಿ ?"

ವಿಶ್ವ ಮುಖದಲ್ಲಿ ಗಾಬರಿಯನ್ನು ವ್ಯಕ್ತಪಡಿಸಿದ.

"ಗಂಗ ಹೇಳುವ ಮಾತಿನಲ್ಲಿ ಅರ್ಥವಿದೆ ವಿಶ್ವ. ದುಡ್ಡೂ ಹಾಳು, ಈ ಸಿಗರೇಟಿನ ಚಟ ದೇಹದ ಆರೋಗ್ಯವನ್ನೂ ನುಂಗಿಹಾಕುತ್ತದೆ. ಈ ದುರಭ್ಯಾಸವೊಂದನ್ನು ಬಿಟ್ಟರೆ, ನೀನು ಚಿನ್ನದಂತಹ ಹುಡುಗ ಕಣೋ...."

ಅನಂತು ವಾತ್ಸಲ್ಯದಿಂದ ವಿಶ್ವನ ಬೆನ್ನಿನ ಮೇಲೆ ಕೈ ಹಾಕಿದ.

"ನನ್ನನ್ನು ಚಿನ್ನಕ್ಕೆ ಯಾಕೆ ಹೋಲಿಸುತ್ತೀಯೊ ? ಈಗ ಚಿನ್ನಕ್ಕೆ ಯಾವ ಬೆಲೆ ಇದೆ ಎನ್ನುವುದು ನಿನಗೆ ಗೊತ್ತಿಲ್ಲವೆ ?"

ವಿಶ್ವನು ಹೊಡೆದ ಹಾಸ್ಯ ಚಟಾಕಿಗೆ ಗಂಗ, ಅನಂತರಾಮು ನಗುವಿನ ತರಂಗಗಳನ್ನೆಬ್ಬಿಸಿದರು.

ಮೂವರೂ ನಗ-ತ್ತಾ ದೇವಸ್ಥಾನದ ಒಳಗೆ ಕಾಲಿಟ್ಟರು. ಅವರು ದೇವರಿಗೆ ಹಣ್ಣು, ಕಾಯಿ ಒಪ್ಪಿಸಿ, ಮಂಗಳಾರತಿ ಮತ್ತು ಪ್ರಸಾದವನ್ನು ತೆಗೆದುಕೊಂಡು ಹೊರಬಿದ್ದರು. ಗರ್ಭಗುಡಿಯ ಬಾಗಿಲಿನಲ್ಲಿ ಬೆಚ್ಚಗೆ ನಿಂತಿದ್ದ ಗಂಗಳಿಗೆ ದೇವಸ್ಥಾನದ ಹೊರಗೆ ಬಂದ ಕೂಡಲೆ ಮೈ ನಡುಗಿ ಬೀಳುವಂತಾಯಿತು.

ಮುಂದೆ ಹೆಜ್ಜೆ ಇಡಲಾರದೆ ಮೈ ಮುದುಡಿಕೊಂಡು ನಡುಗುತ್ತಾ ನಿಂತಳು.

"ಅಬ್ಬಾ ! ಏನು ಚಳಿ ಈ ಬೆಟ್ಟದ ಮೇಲೆ ?"

"ನೀವು ನನ್ನ ಕೋಟನ್ನು ಹಾಕಿಕೊಳ್ಳದೇ ಇದ್ರೆ ನಾನೇ ಬಲವಂತಮಾಡಿ ಹಾಕಿಬಿಡ್ತೇನೆ....ಹುಷಾರ್ !"

ವಿಶ್ವ ಹೆಗಲ ಮೇಲಿದ್ದ ಕೋಟನ್ನು ಗಂಗಳ ಹೆಗಲಿನ ಮೇಲಿಟ್ಟ. ಪ್ರಾತಿ ಸಂತೆ ವಿಶ್ವ ನಡೆದುಕೊಂಡರೆ ಎಲ್ಲರೆದುರಿನಲ್ಲಿ ತನಗೆ ನಗುಪಾಟಲಾಗುವುದೆಂದು ಅಂಜಿ ಗಂಗ ವಿಶ್ವನ ಕೋಟನ್ನು ಹಾಕಿಕೊಂಡಳು.

"ಕೋಟೆಲ್ಲಾ ಸಿಗರೇಟಿನ ವಾಸನೆ...." ಗಂಗ ಮುಖ ಸಿಂಡರಿಸಿಕೊಂಡಳು.

"ಈಗಿನಿಂದ ಅದನ್ನೆಲ್ಲಾ ಅಭ್ಯಾಸ ಮಾಡಿಕೊಳ್ಳಬೇಕು, ನೀನು ಮುಂದೆ ಸಿಗರೇಟು ಸೇದುವವನ ಕೈ ಹಿಡಿದರೆ?" ಅನಂತು ವಿಶ್ವನಾಥನಿಂದ ಎಲ್ಲ ವಿಷಯ ವನ್ನು ತಿಳಿದುಕೊಂಡಿದ್ದರೂ, ತಿಳಿಯದವನಂತೆ ನಟಿಸಿದ.

"ನಿಮ್ಮ ಕೋಟು ನನಗೆ ತುಂಬಾ ದೊಡ್ಡದು ವಿಶ್ವನಾಥ್. ನನ್ನ ಕೈಗಳೇ ನನಗೆ ಕಾಣಿಸುತ್ತಿಲ್ಲ...."

ಕೋಟಿನೊಳಗೆ ಹುದುಗಿ ಹೋಗಿದ್ದ ತನ್ನ ಕೈಗಳನ್ನು ಹುಡುಕುವ ನೆವದಲ್ಲಿ ಗಂಗ ಅನಂತರಾಮು ಹೇಳಿದ ಮಾತು ತನಗೆ ಕೇಳಿಸಲಿಲ್ಲವೆಂಬಂತೆ ನಟಿಸಿದಳು.

* * * *

ಜೋಬಿನ ತುಂಬಾ ದುಡ್ಡಿರುತ್ತಿದ್ದ ವಿಶ್ವನಿಗೆ ಹಣದ ಯೋಚನೆ ಇರುತ್ತಿರಲಿಲ್ಲ. ಗಂಗಳಿಗಾಗಿ, ಅವಳನ್ನು ಸುಖಿಯನ್ನಾಗಿ ಮಾಡಲು, ಪ್ರೇಕ್ಷಣೀಯವಾದ ಸ್ಥಳಗಳಿಗೆ ಅವಳನ್ನು ಕರೆದುಕೊಂಡು ಹೋಗಲು, ಎಷ್ಟು ಹಣವನ್ನು ಬೇಕಾದರೂ ಖರ್ಚು ಮಾಡಲು ವಿಶ್ವ ಸಿದ್ಧನಾಗಿದ್ದ.

ಗಂಗಳ ಹುಟ್ಟಿದ ಹಬ್ಬದ ದಿನವನ್ನು ತಿಳಿದುಕೊಂಡು ವಿಶ್ವ ಆ ದಿನ ಅವಳಿ ಗೊಂದು ಉಡುಗೊರೆಯನ್ನು ಅಂಚೆಯ ಮೂಲಕ ಕಳುಹಿಸಿಕೊಟ್ಟ. ಅಂಚೆಯ ಮೂಲಕ ಒಂದು ಕಾಗದದ ಪೊಟ್ಟಣ ಗಂಗೆಯ ಕೈ ಸೇರಿದಾಗ, ಅವಳಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಒಂದು ನೈಲಾನ್ ಸೀರೆ—ಅವನು ಕೊಟ್ಟ ಉಡುಗೊರೆ!

ಅದರ ಸಂಗಡ ಇದ್ದ ಒಂದು ಪುಟ್ಟ ಕಾಗದದಲ್ಲಿ ಎರಡು ಮಾತು ಬರೆದಿದ್ದ ವಿಶ್ವ. ಸಾಯಂಕಾಲ ತಾನು ಹಾಸ್ಟಲ್ಲಿಗೆ ಬರುವುದಾಗಿಯೂ, ಆ ಸೀರೆಯನ್ನು ಗಂಗ ಉಡಬೇಕೆಂದೂ ವಿಶ್ವ ಕಾಗದದಲ್ಲಿ ಅವಳನ್ನು ವಿನಯದಿಂದ ಪ್ರಾರ್ಥಿಸಿಕೊಂಡಿದ್ದ.

ಕಾಗದದ ಚೀಲದೊಳಗೆ ಕೈ ಹಾಕಿ ಸೀರೆಯನ್ನು ಗಂಗ ಹೊರಗೆಳೆದಳು.

ಸೀರೆಯ ಎಳೆನಿಂಬೆಯ ಬಣ್ಣ ಅವಳನ್ನು ಆಕರ್ಷಿಸಿತು. ಅಂಚು, ಸೆರಗಿಲ್ಲದ ಆ ಸೀರೆ ನೋಡಲು ಸಾಮಾನ್ಯವಾದ ಸೀರೆಯಂತೆ ಕಂಡರೂ, ಅದು ಬಹಳ ಬೆಲೆ ಬಾಳುವ ಬಟ್ಟೆಯೆಂದು ಗಂಗೆಗೆ ತಿಳಿಯಿತು.

"ಕಣ್ಣಿಗೆ ಹಿತವನ್ನುಂಟು ಮಾಡುವ, ಹೃದಯಕ್ಕೆ ತಂಪು ನೀಡುವಂತಹ ಈ ಬಣ್ಣ ಎಷ್ಟು ಚೆನ್ನಾಗಿದೆ! ಸೀರೆಯ ಬಣ್ಣವನ್ನು ಆರಿಸುವುದರಲ್ಲಿ ಅವರಿಗೆ ಎಷ್ಟು ಒಳ್ಳೆಯ ಅಭಿರುಚಿ ಇದೆ"

ಗಂಗ ವಿಶ್ವನ ಅಭಿರುಚಿಯನ್ನು ಮನಸ್ಸಿನಲ್ಲೇ ಮೆಚ್ಚಿಕೊಂಡಳು.

ಸಾಯಂಕಾಲ ನಾಲ್ಕು ಘಂಟೆಗೇ ಗಂಗ ಮುಖದ ಅಲಂಕಾರವನ್ನು ಮುಗಿಸಿ ವಿಶ್ವ ಕಳುಹಿಸಿದ್ದ ಸೀರೆಯನ್ನು ಉಡಲು ಪ್ರಯತ್ನಿಸಿದಳು.

ಎಷ್ಟು ಪ್ರಯತ್ನಿಸಿದರೂ, ಹೇಗೆ ಉಡಲು ಯೋಚಿಸಿದರೂ ಆ ಸೀರೆಯನ್ನು ಉಟ್ಟುಕೊಳ್ಳಲು ಅವಳಿಂದ ಸಾಧ್ಯವಾಗಲಿಲ್ಲ. ನೆರಿಗೆಗಳನ್ನು ಜೋಡಿಸಿದರೆ, ಎದೆಯ ಮೇಲೆ ಹಾದು ಬರುವ ಸೆರಗಿಗೆ ಬಟ್ಟೆಯೇ ಮಿಗುತ್ತಿರಲಿಲ್ಲ.

ನೆರಿಗೆಗಳಿದ್ದರೆ ಸೆರಗಿಲ್ಲ!

ಸೆರಗನ್ನು ಹೊದ್ದುಕೊಂಡರೆ ಸೀರೆಯ ನೆರಿಗೆಗಳಿಗೆ ಬಟ್ಟೆಯೇ ಇಲ್ಲ!

ಗಂಗ ಸ್ವಲ್ಪ ತಲೆಯೋಡಿಸಿ ಸೀರೆಯ ಉದ್ದವನ್ನು ಮೊಳಹಾಕಿ ಅಳತೆ ಮಾಡಿದಳು. ತನ್ನದೊಂದು ಆರು ಗಜದ ಸೀರೆಯೊಡನೆ ಹಿಡಿದು ವಿಶ್ವ ಕಳುಹಿಸಿದ್ದ ಸೀರೆಯ ಉದ್ದವನ್ನು ಪರೀಕ್ಷೆಮಾಡಿದಳು. ವಿಶ್ವ ಕಳುಹಿಸಿದ್ದ ಸೀರೆ ನಾಲ್ಕುಗಜದ ಮೇಲೆ ಒಂದು ಅಂಗುಲದಷ್ಟೂ ಇರಲಿಲ್ಲ. ಗಂಗೆಗೆ ನಿರಾಶೆಯಲ್ಲೂ ನಗು ಬಂತು. ಸೀರೆಯನ್ನು ಮಂಚದ ಮೇಲೆ ಹಾಕಿ, ಅದರ ಮೇಲೆ ಹೊರಳಾಡುತ್ತಾ ತೃಪ್ತಿಯಾಗುವವರೆಗೂ ನಕ್ಕಳು. ವಿಶ್ವ ಬೇಕೆಂದೇ ಈ ರೀತಿ ಮಾಡಿರಬಹುದೆಂಬ ಯೋಚನೆ ಅವಳ ತಲೆಯಲ್ಲಿ ಧೃಢವಾಗಿ ನಿಂತಿತು. 'ಸಾಯಂಕಾಲ ಬರಲಿ, ತರಾಟೆಗೆ ತೆಗೆದುಕೊಳ್ಳುತ್ತೇನೆ' ಎಂದುಕೊಂಡು ಆ ಸೀರೆಯನ್ನು ಗಂಗ ಮೊದಲಿದ್ದಂತೆ ಆ ಕಾಗದದ ಚೀಲದಲ್ಲಿ ಮಡಿಸಿಟ್ಟಳು. ಸೂರ್ಯಚಂದ್ರರು ಕಾಲಕ್ಕೆ ಸರಿಯಾಗಿ ಕಾಣಿಸಿಕೊಳ್ಳದೇ ಇದ್ದರೂ, ವಿಶ್ವ ಗಂಗೆಗೆ ಕೊಟ್ಟ ಮಾತಿನಂತೆ ಸಾಯಂಕಾಲ ಐದು ಘಂಟೆಗೆ ಸರಿಯಾಗಿ ಹಾಸ್ಟಲ್ಲಿನ ಗೇಟಿನಬಳಿ ಕಾಣಿಸಿಕೊಂಡ.

ಗಂಗ ದುಃಖ ಸೂಚಕವಾದ ಕಪ್ಪು ಬಣ್ಣದ ಸೀರೆಯುಟ್ಟು ವಿಶ್ವನ ಮುಂದೆ ಬಂದು ನಿಂತಾಗ ಅವನಿಗೆ ಆದ ಆಶ್ಚರ್ಯ ಅಷ್ಟಿಷ್ಟಲ್ಲ! ತಾನು ಕಳುಹಿಸಿದ ಸೀರೆಯನ್ನು ಸಾಯಂಕಾಲ ಉಟ್ಟುಕೊಳ್ಳಬೇಕೆಂದು ಕಾಗದದಲ್ಲಿ ಬರೆದಿದ್ದರೂ ಗಂಗ ಕರಿಯ ಸೀರೆಯನ್ನುಟ್ಟಿದ್ದಾಳಲ್ಲಾ? ನನಗೆ ನಿರಾಶೆ ಮಾಡಬೇಕೆಂದು ಈ ರೀತಿ ಮಾಡಿದ್ದಾಳೆಯೆ? ಛಿ! ಗಂಗ ಅಂತಹ ಹುಡುಗಿಯಲ್ಲ....ಗಂಗ ಉಟ್ಟಿದ್ದ ಕಪ್ಪು ಬಣ್ಣದ ಸೀರೆಯನ್ನೇ ಕಣ್ಣುಗಳನ್ನಗಲಿಸಿ ನೋಡುತ್ತಿದ್ದ ವಿಶ್ವನ ಮುಖದಲ್ಲಿದ್ದ ಉತ್ಸಾಹವೆಲ್ಲಾ ಇಂಗಿಹೋಯಿತು. ನೂರಾರು ಸೀರೆಗಳಲ್ಲಿ ತಾನು ಚುನಾಯಿಸಿ ತಂದಿದ್ದ ಸೀರೆ ಅದು....ಅಲ್ಲ ಮನಮೆಚ್ಚಿದ ಬಣ್ಣದ ನಾಲ್ಕು ಗಜ ಬಟ್ಟೆಯನ್ನು ಹರಿಸಿಕೊಂಡು ಬಂದಿದ್ದ...ಗಂಗೆಗಾಗಿ....ಅವನ ಪ್ರೇಯಸಿಗಾಗಿ....

"ಗಂಗ....ನಾನು ಕಳುಹಿಸಿದ ಸೀರೆ ನಿನಗೆ ತಲುಪಿತು ತಾನೆ?"

"ತಲುಪಿತು....ಸೀರೆ ತುಂಬಾ ಚೆನ್ನಾಗಿದೆ...."

ಸಮೀಪದಲ್ಲಿ ಗಜಗೌರಿಯಂತೆ ಬಂದು ನಿಂತುಕೊಂಡ ಗಂಗೆಯನ್ನು ವಿಶ್ವ ಪ್ರಶ್ನೆ ಮಾಡಿದ. 'ಸೀರೆ ತುಂಬಾ ಚೆನ್ನಾಗಿದೆ' ಎಂದು ಹೇಳುವಾಗ ಅವಳ ಬಾಯಿಂದ ನಗೆಹನಿ ತೊಟ್ಟಿಕ್ಕುತ್ತಿತ್ತು.

"ಈ ಸಾಯಂಕಾಲ ನಾನು ಕಳುಹಿಸಿದ ಸೀರೆಯನ್ನು ಉಟ್ಟುಕೊಂಡಿರ್ತೀಯೇನೊ ಎಂದು ನಾನು ಎಷ್ಟೋ ಆಸೆಯಿಂದಿದ್ದೆ. ನನ್ನ ಈ ಸಣ್ಣ ಆಸೆಯನ್ನು ನಡೆಸಿಕೊಡಲಾರದೆ ಹೋದೆಯಲ್ಲಾ ಗಂಗ...."

ನೋವು ತುಂಬಿದ ವಿಶ್ವನ ಹೃದಯದಿಂದ ಉದ್ವೇಗಗೊಂಡು ಹೊರಬಂದ ಮಾತು ಬಿಲ್ಲಿನಿಂದ ಬಂದ ಬಿರುಸಿನ ಬಾಣದಂತೆ ಗಂಗೆಯನ್ನು ನೋಯಿಸಿದವು.

"ವಿಶ್ವನಾಥ್....ನಾಲ್ಕು ಗಜದ ಸೀರೆಯನ್ನು ನಾನು ಹೇಗೆ ಉಡಲಿ ?"

"ಯಾಕೆ? ನಿನ್ನ ಸೀರೆಗೆ ನಾಲ್ಕು ಗಜ ಸಾಕಾಗುವುದಿಲ್ಲವೆ?"

ವಿಶ್ವ ಆಶ್ಚರ್ಯದಿಂದ ಗಂಗಳನ್ನು ಕೇಳಿದ.

"ಆರು ಗಜಕ್ಕೆ ಒಂದು ಗೆರೆ ಕಡಿಮೆಯಿದ್ದರೂ ನನಗೆ ಉಡಲು ಸಾಧ್ಯವಾಗುವುದಿಲ್ಲ....ಹೆಂಗಸರು ಉಡುವ ಸೀರೆಗಳು ಆರು ಗಜ ಇರಬೇಕು ಎನ್ನುವುದು ನಿಮಗೆ ಗೊತ್ತೇ ಇರಲಿಲ್ಲವೆ?"

ವಿಶ್ವನ ಮಾತನ್ನು ನಂಬದವಳಂತೆ ಕುತೂಹಲದಿಂದ ಗಂಗ ಪ್ರಶ್ನಿಸಿದಳು.

"ನಾನು ಹುಟ್ಟಿದ ಇಪ್ಪತ್ತಾರು ವರ್ಷಗಳಲ್ಲಿ ಹುಡುಗಿಯೊಬ್ಬಳಿಗೆ ಸೀರೆ ತರುತ್ತಿರುವುದು ಇದೇ ಮೊದಲು. ನನಗೆ ಅಕ್ಕ ತಂಗಿಯರಿಲ್ಲ....ಚಿಕ್ಕ ವಯಸ್ಸಿನಲ್ಲೇ ಹೆತ್ತ ತಾಯಿಯನ್ನು ಕಳೆದುಕೊಂಡೆ. ನನ್ನ ಹತ್ತನೆಯ ವಯಸ್ಸಿನಲ್ಲಿ ನನ್ನ ತಾಯಿಯಂತೆಯೇ ನೋಡಿಕೊಳ್ಳುತ್ತಿದ್ದ ಬಲತಾಯಿಯನ್ನೂ ಕಳೆದುಕೊಂಡೆ. ಖಂಡಿತವಾಗಿ ನನಗೆ ಹೆಂಗಸರ ಸೀರೆಗಳ ಉದ್ದ ಆರು ಗಜ ಇರುವುದೆಂದು ಗೊತ್ತಿರಲಿಲ್ಲ. ನನ್ನ ಮಾತಿನಲ್ಲಿ ನಂಬಿಕೆ ಇಡು ಗಂಗ....ನಿನ್ನ ಹುಟ್ಟಿದ ಹಬ್ಬದ ದಿನ ಎಂತಹ ಉಡುಗೊರೆಯನ್ನು ಕಳುಹಿಸಿದೆ!"

ದೀನ ಸ್ವರದಿಂದ ವಿಶ್ವ ಗಂಗಳ ಕ್ಷಮೆ ಯಾಚಿಸಿ ದುಃಖಿಸಿದ.

"ನೀವು ಬೇಕೆಂದೇ ಈ ರೀತಿ ಮಾಡಿದ್ದೀರಿ ಎಂದುಕೊಂಡು ನಿಮ್ಮ ಮೇಲೆ ಸಿಟ್ಟಾಗಿದ್ದೆ. ನಾಲ್ಕು ಗಜ ಬಟ್ಟೆಯನ್ನು ನೀವು ಯಾವ ಅಂಗಡಿಯಲ್ಲಿ ಕೊಂಡುಕೊಂಡಿರೊ, ಅದೇ ಅಂಗಡಿಯಲ್ಲಿ ಅದೇ ಜಾತಿಯ, ಅದೇ ಬಣ್ಣದ ಎರಡು ಗಜ ಬಟ್ಟೆಯನ್ನು ತಂದುಕೊಡಿ. ನೀವು ತರುವ ಎರಡು ಗಜವನ್ನು ನನ್ನ ಹತ್ತಿರ ಇರುವ ಬಟ್ಟೆಗೆ ಸೇರಿಸಿ ಹೊಲಿದುಕೊಂಡು ಸೀರೆಯನ್ನಾಗಿ ಮಾಡಿಕೊಳ್ಳುತ್ತೇನೆ."

ಗಂಗ ನನಗೆ ತಿಳಿದ ಸಲಹೆಯನ್ನು ವಿಶ್ವನಾಥನಿಗೆ ನೀಡಿ ಅವನ ಮನಸ್ಸಿಗೆ ಸ್ವಲ್ಪ ಶಾಂತಿಯನ್ನು ತಂದು ಕೊಡಲು ಪ್ರಯತ್ನಿಸಿದಳು.

"ಗಂಗ....ಸ್ವಲ್ಪ ಪೇಟೆಯ ಕಡೆ ಹೋಗಿ ಬರೋಣ ಬಾ...."

ವಿಶ್ವನ ಕರೆಯನ್ನು ಮನ್ನಿಸಿ ಗಂಗ ಅವನೊಡನೆ ಹೊರಟಳು. ಸೈಕಲ್ಲಿನ ಮೇಲೆ ಕುಳಿತು, ಅಕ್ಕಪಕ್ಕದಲ್ಲೆಲ್ಲ ಸೈಕಲ್ ಸವಾರಿ ಮಾಡುತ್ತಾ, ದಾರಿಯುದ್ದಕ್ಕೂ ಹರಟುತ್ತಾ ಅವರಿಬ್ಬರೂ ಮುಂದೆ ಸಾಗಿದರು.

* * * *

ಕೊನೆಯ ವರ್ಷದ ಎಂ. ಬಿ. ಬಿ. ಎಸ್. ಪರೀಕ್ಷೆಯಲ್ಲಿ ಗಂಗ ಮೊದಲನೆಯ ದರ್ಜೆಯಲ್ಲಿ ತೇರ್ಗಡೆಯಾದಳು. ಎಳೆತನದಿಂದ ಬೆಳೆಸಿಕೊಂಡು ಬಂದಿದ್ದ ಆಸೆಯೆಂಬ ಅವಳ ಬಳ್ಳಿ ಬೆಳೆದು, ದೊಡ್ಡದಾಗಿ ಹರಡಿ ಹೂವನ್ನು ಬಿಟ್ಟಿತು. ವಿಶ್ವನಿಗೆ ತೇರ್ಗಡೆಯಾಗಿರುವುದೆಂದು ಪತ್ರಿಕೆಯಲ್ಲಿ ನೋಡಿ ಗಂಗೆಗೆ ಹಿಡಿಸಲಾರದಷ್ಟು ಆನಂದವಾಯಿತು. ಪತ್ರಿಕೆಯಲ್ಲಿ ಪರೀಕ್ಷೆಯ ಫಲಿತಾಂಶವನ್ನು ನೋಡುತ್ತಿದ್ದ ಗಂಗ ತಂದೆಗೆ ಸಂಭ್ರಮದಿಂದ ಹೇಳಿದಳು.

"ಅಣ್ಣಾ....ವಿಶ್ವನಿಗೆ ತೇರ್ಗಡೆಯಾಗಿದೆ...."

"ವಿಶ್ವನ ಫಲಿತಾಂಶ ಇರಲಿ....ನಿನ್ನದೇನಾಯಿತು, ಮೊದಲು ಹೇಳು...."

ಮಾಧವ ಮುದ್ದಿನ ಮಗಳ ಫಲಿತಾಂಶವನ್ನು ತಿಳಿಯಲು ತವಕಿಸಿದ.

"ನನಗೆ ಮೊದಲನೆಯ ದರ್ಜೆಯಲ್ಲಿ ತೇರ್ಗಡೆಯಾಗಿದೆ...."

ಗಂಗ ನಿರ್ವಿಕಾರ ಭಾವದಿಂದ, ಯಾವ ವಿಧವಾದ ಸಂತೋಷವನ್ನೂ ವ್ಯಕ್ತಪಡಿಸದೆ ತಂದೆಗೆ ತನ್ನ ಫಲಿತಾಂಶವನ್ನು ತಿಳಿಸಿದಳು.

"ಅಭಿವಂದನೆಗಳು....ಕುಮುದಾ....ನೋಡಿದ್ಯಾ....ನಾನು ನಿನಗೆ ಹೇಳಿದ ಹಾಗೆ ಗಂಗ ಮೊದಲನೆಯ ದರ್ಜೆಯಲ್ಲಿ ತೇರ್ಗಡೆಯಾಗಿದ್ದಾಳೆ...."

"ಹೌದೇನು ?....ದೇವರಿಗೆ ತುಪ್ಪದ ದೀಪ ಹತ್ತಿಸಿಟ್ಟು ಬರ್‍ತೀನಿ...."

ಹಜಾರದ ಬಾಗಿಲ ಬಳಿ ಒಂದು ಬಾರಿ ತಲೆಹಾಕಿದ ಕುಮುದ ಸಂಭ್ರಮದಿಂದ ದೇವರ ಕೋಣೆಯೊಳಗೆ ಹೋದಳು. ಸ್ವಲ್ಪ ದಿವಸಗಳಲ್ಲಿಯೇ ರಾಜ್ಯಕ್ಕೆಲ್ಲಾ ಗಂಗ ಮೊದಲನೆಯ ರ್‍ಯಾಂಕು ಬಂದಿರುವಳೆಂದು ತಿಳಿಯಿತು. ಎರಡು ಚಿನ್ನದ ಪದಕಗಳು, ಹಣದ ರೂಪದಲ್ಲಿ ಎರಡು ಬಹುಮಾನಗಳನ್ನು ಗಂಗ ಘಟಿಕೋತ್ಸವದಲ್ಲಿ ಮಹಾರಾಜರಿಂದ ಪಡೆಯುವಳೆಂದು ವಿಶ್ವನಿಗೆ ತಿಳಿದಾಗ ಅವನು ಬಾಯ್ತುಂಬ ಗಂಗಳನ್ನು ತಂದೆಯ ಮುಂದೆ ಹೊಗಳಿದ.

"ಚಿಕ್ಕ ವಯಸ್ಸಿನಲ್ಲೇ ಪೋಲಿಯೋ ಖಾಯಿಲೆಯಿಂದ ಒಂದು ಕಾಲನ್ನು

ಕಳೆದುಕೊಂಡಿದ್ದರೂ, ಬಾಲ್ಯದಿಂದ ತೊಂದರೆ, ಕಷ್ಟಗಳಿಂದಲೇ ಬೆಳೆದಿದ್ದರೂ, ಗಂಗ ಓದಿನಲ್ಲಿ ಬಹಳ ಆಸಕ್ತಿ ತೋರಿದ್ದಾಳೆ ಅಣ್ಣ....ಹುಡುಗಿ ತುಂಬಾ ಬುದ್ಧಿವಂತೆ. ಆದರೂ ಸ್ವಲ್ಪವೂ ಅಹಂಕಾರವಿಲ್ಲ. ವಿದೇಶಕ್ಕೆ ಹೋಗಿ ಉನ್ನತ ವಿದ್ಯಾಭ್ಯಾಸ ಮಾಡಿ ಬರಲು ವಿದ್ಯಾರ್ಥಿ ವೇತನ ಖಂಡಿತವಾಗಿಯೂ ಸಿಕ್ಕುವುದು."

"ಬದುಕಿನ ಪ್ರಾರಂಭದಲ್ಲೇ ಆ ಹುಡುಗಿಗೆ ದೊಡ್ಡ ನಿರಾಶೆಯಾಗಿದ್ದರೂ, ಅದೊಂದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ವಿದ್ಯಾಭ್ಯಾಸದಲ್ಲಿ ಪ್ರಗತಿ ಗಳಿಸಿರುವ ಆ ಹುಡುಗಿಯ ಮನಸ್ಥೈರ್ಯವನ್ನು ಯಾರಾದರೂ ಮೆಚ್ಚತಕ್ಕದ್ದೆ!"

ವೆಂಕಟರಾಮಯ್ಯನವರು ಎಂದೂ ನೋಡದ, ಪರಿಚಯವಿಲ್ಲದ ಮಗನ ಸಹಪಾಠಿಯಾದ ಗಂಗಳನ್ನು ಹೊಗಳಿದರು. ಘಟಿಕೋತ್ಸವ ಸಮೀಪಿಸುತ್ತಿದ್ದಂತೆ ಗಂಗಳ ಸಮಸ್ಯೆ ಹಿರಿದಾಗುತ್ತಾ ಹೋಯಿತು. ನಾಲ್ಕು ಬಹುಮಾನಗಳನ್ನು ಎತ್ತರವಾದ ವೇದಿಕೆಯ ಮೇಲೆ ನಿಂತು ಸಾವಿರಾರು ಪಥವೀಕ್ಷಕರ ಮುಂದೆ ಮಹಾರಾಜರ ಸ್ವಹಸ್ತದಿಂದ ಪಡೆಯುವ ಆಸೆ ಗಂಗೆಗಿತ್ತು. ಆದರೆ....ಕುಂಟುತ್ತಾ ಎಲ್ಲರ ಎದುರಿನಲ್ಲಿ ವೇದಿಕೆಯನ್ನು ಹತ್ತಿ ಹೋಗಬೇಕಲ್ಲಾ? ಎನ್ನುವ ಅಳುಕು ಅವಳ ಮನಸ್ಸಿನಲ್ಲಿ ಕೊರೆಯುತ್ತಿತ್ತು.

"ಗಂಗ....ನಾನು, ಕುಮುದ ನಿನ್ನ ಜೊತೆ ಮೈಸೂರಿಗೆ ಬರುತ್ತೇವೆ...."

"ಯಾಕೆ?" ಮಧುಕರನಿಗೆ ಸ್ವೆಟರನ್ನು ಹಾಕುತ್ತಿದ್ದ ಗಂಗ ತಲೆಎತ್ತಿ ತಂದೆಯನ್ನು ನೋಡಿದಳು. ತಂದೆಯ ಮಾತಿಗೆ ಆಶ್ಚರ್ಯವನ್ನು ಗಂಗ ವ್ಯಕ್ತಪಡಿಸಿದಳು.

"ಇನ್ಯಾಕೆ? ನೀನು ಬಹುಮಾನಗಳನ್ನು ಮಹಾರಾಜರಿಂದ ಪಡೆಯುವುದನ್ನು ನಾವು ನೋಡಬೇಕೇನು?"

"ನಾನೇ ಹೋಗುವುದಿಲ್ಲ ಅಣ್ಣ...." ಗಂಗ ತಗ್ಗಿದಧ್ವನಿಯಲ್ಲಿ ತಂದೆಗೆ ತನ್ನ ನಿರ್ಧಾರವನ್ನು ತಿಳಿಸಿದಳು. ಮಗಳ ಬಾಯಿಂದ ಬಂದ ಅನಿರೀಕ್ಷಿತವಾದ ಮಾತು ಮಾಧವನನ್ನು ದಿಗ್ಭ್ರಮೆಗೊಳಿಸಿತು. ಕಡೆದ ಶಿಲಾ ವಿಗ್ರಹದಂತೆ ನಿಂತಲ್ಲಿಯೇ ನಿಂತುಕೊಂಡ ತಂದೆಯನ್ನು ಗಂಗ ತಲೆಎತ್ತಿ ನೋಡಿದಳು. ಮಗಳ ಮನಸ್ಸಿನಲ್ಲಿ ಆಗುತ್ತಿದ್ದ ಆಂದೋಳನವನ್ನು ಮಾಧವನೂ ಊಹೆ ಮಾಡಿದ.

"ಎಲ್ಲರೆದುರಿನಲ್ಲಿ ನಡೆದು ಹೋಗಲು ನಿನಗೆ ಸಂಕೋಚವೇ ಗಂಗ?"

ಮಾಧವ ಮಗಳ ತಲೆಯನ್ನು ಸವರುತ್ತಾ ಕೇಳಿದ.

"ಹೌದು ಅಣ್ಣ. ಎಲ್ಲರೆದುರಿನಲ್ಲಿ ನಿಧಾನವಾಗಿ ಕುಂಟುತ್ತಾ ವೇದಿಕೆಯನ್ನು ಹತ್ತುವುದು ನನಗಿಷ್ಟವಿಲ್ಲ. ಮನೆಯಲ್ಲೇ ಕುಳಿತು ಡಿಗ್ರಿಯನ್ನೂ, ಬಹುಮಾನಗಳನ್ನೂ ತರಿಸಿಕೊಂಡುಬಿಡುತ್ತೇನೆ...."

"ಇನ್ನೂ ನಿನ್ನ ಕಾಲಿನ ವಿಷಯವಾಗಿ ಯೋಚಿಸಿ ಕೊರಗುತ್ತೀಯ ಗಂಗ? ನನಗಾಗಿ ಕುಮುದಳಿಗಾಗಿ ನಿನ್ನ ನಿರ್ಧಾರವನ್ನು ಬದಲಾಯಿಸಲಾರೆಯಾ ಗಂಗ....?" ಮಾಧವ ಮಗಳನ್ನು ದೈನ್ಯದಿಂದ ಕೇಳಿಕೊಂಡ.

"ಯೋಚಿಸಲು ಇನ್ನೂ ಬೇಕಾದಷ್ಟು ದಿವಸಗಳಿವೆ. ಈಗಿನಿಂದ ಯಾಕೆ ಮಾತು?" ಅಡ್ಡ ಗೋಡೆಯ ಮೇಲಿಟ್ಟ ದೀಪದಂತೆ ಮಾತನಾಡಿ ಗಂಗ ಆ ಸ್ಥಳ ದಿಂದ ಮೇಲೆದ್ದಳು. ಮಾರನೆಯದಿನ ವಿಶ್ವನಾಥ ದೀರ್ಘವಾದ ಪತ್ರವೊಂದನ್ನು ತನ್ನ ಪ್ರೇಯಸಿಗೆ ಬರೆದು ಹಾಕಿದ. ಖಂಡಿತವಾಗಿಯೂ, ತಪ್ಪಿಸಿಕೊಳ್ಳದೆ ಘಟಿಕೋತ್ಸವಕ್ಕೆ ಬಂದೇ ತೀರಬೇಕೆಂದು ವಿಶ್ವ ಗಂಗಳಿಗೆ ಕಾಗದದ ಮೂಲಕ ಒತ್ತಾಯ ಮಾಡಿದ್ದ. ಮೈಸೂರಿನಲ್ಲಿ ಭೇಟಿಯಾಗ, ಅನೇಕ ವಿಷಯಗಳನ್ನು ತಾನು ಅವಳಿಗೆ ತಿಳಿಸಬೇಕಾಗಿರುವುದಾಗಿಯೂ ವಿಶ್ವ ಗಂಗಳಿಗೆ ಬರೆದಿದ್ದ.

ಗಂಗ ವಿಶ್ವನ ಕಾಗದವನ್ನು ಓದಿದ ಕೂಡಲೆ ತನ್ನ ನಿರ್ಧಾರವನ್ನು ಬದಲಾಯಿಸಿದಳು. ವಿಶ್ವನನ್ನು ಭೇಟಿಯಾಗುವ ಚಪಲ ಅವಳಿಗೂ ಇತ್ತು.

* * * *

ಕರಿಯ ಕೋಟುಗಳ ಸಮೂಹದಲ್ಲಿ ಗಂಗಳನ್ನು ಪತ್ತೆಹಚ್ಚುವುದು ವಿಶ್ವ ನಾಥನಿಗೆ ಬಹಳ ಕಷ್ಟವಾಯಿತು. ಕ್ರಾಫರ್ಡ್ ಹಾಲಿನ ಮುಂಭಾಗದಲ್ಲಿ ನಿಂತಿದ್ದ ಗಂಗ ತಂದೆ ತಾಯಿಗಳಿಗೆ ತಾನು ಗಳಿಸಿದ್ದ ಚಿನ್ನದ ಪದಕಗಳನ್ನು ತೋರಿಸು ತ್ತಿದ್ದಾಗ ಅವಳನ್ನು ವಿಶ್ವ ನೋಡಿದ.

"ಪದಕಗಳನ್ನು ಗಳಿಸಿದವರಿಗೆ ಅಭಿನಂದನೆಗಳು...."

ಗಂಗಳ ತಂದೆತಾಯಿಗಳ ಎದುರಿನಲ್ಲಿ ಅವಳನ್ನು ಏಕವಚನದಲ್ಲಿ ಮಾತ ನಾಡಿಸಲು ವಿಶ್ವನಿಗೆ ಧೈರ್ಯ ಸಾಲದೆ ಹೋಯಿತು.

"ನಿಮಗೂ ಅಭಿನಂದನೆಗಳು." ದೊಡ್ಡದಾಗಿದ್ದ ಕರಿಯ ಕೋಟನ್ನು ಧರಿಸಿದ್ದ ಗಂಗ ಹೈಸ್ಕೂಲಿನಲ್ಲಿ ಓದುವ ಹುಡುಗಿಯಂತೆ ವಿಶ್ವನಾಥನಿಗೆ ಕಂಡಳು.

"ಈ ಪುಟ್ಟ ತಲೆಯೊಳಗೆ ದೇವರು ಎಷ್ಟೊಂದು ಬುದ್ಧಿಶಕ್ತಿಯನ್ನು ತುಂಬಿ ದ್ದಾನೆ!" ಎಂದು ವಿಶ್ವ ಮನಸ್ಸಿನಲ್ಲೇ ಯೋಚಿಸಿಕೊಂಡ.

"ಎಲ್ಲಿ....ನಿಮ್ಮ ಪದಕಗಳನ್ನು ನೋಡೋಣ? ಪಡೆಯುವಷ್ಟು ಭಾಗ್ಯಶಾಲಿ ನಾನಲ್ಲದಿದ್ದರೂ ಪದಕಗಳನ್ನು ನೋಡಿಯಾದರೂ ಸಂತೋಷಪಡೋಣ...."

ಎರಡು ಪುಟ್ಟ ಪೆಟ್ಟಿಗೆಗಳನ್ನು ಗಂಗ ವಿಶ್ವನಾಥನ ಕೈಲಿಟ್ಟಳು.

ಕೆಂಪು ಮಕಮಲ್ ಬಟ್ಟೆಯ ಹಿನ್ನೆಲೆಯಲ್ಲಿ ಮಲಗಿದ್ದ ಚಿನ್ನದ ಪದಕ ಗಳನ್ನು ವಿಶ್ವ ಕಣ್ಣು ತುಂಬ ನೋಡಿದ. ಅನಂತರ ಆ ಸುವರ್ಣ ಪದಕಗಳ ಒಡತಿ

ಯನ್ನು ವಿಶ್ವ ಅಕ್ಕರೆಯಿಂದ ನೋಡಿದ. ವಿದೇಶಕ್ಕೆ ಹೋಗಲು ವಿದ್ಯಾರ್ಥಿ ವೇತನ ಪಡೆಯಲು ಗಂಗ ಪ್ರಯತ್ನಿಸಲು ನಿರ್ಧರಿಸಿದಳು. ಅದಕ್ಕಾಗಿ ಅವಳು ಒಂದು ವಾರ ಮೈಸೂರಿನಲ್ಲಿ ಉಳಿದಳು. ಮಾಧವ ಮಾಧವ ಹೆಂಡತಿಯೊಡನೆ ಮಂಡ್ಯಕ್ಕೆ ಹಿಂತಿರುಗಿದ. ಒಂದು ವಾರ ಗಂಗ ವಿಶ್ವನ ಸಹವಾಸಲ್ಲೇ ಕಾಲ ಕಳೆದಳು. ಮದುವೆಯಾಗುವ ಅಪೇಕ್ಷೆ ಅವರಿಗಿದ್ದರೂ ಅರಸರದಲ್ಲಿ ಸತಿಪತಿಗಳಾಗ ಬೇಕೆಂಬಾತುರ ಇಬ್ಬರಿಗೂ ಇರಲಿಲ್ಲ. ಎಲ್ಲರಿಂದಲೂ ತಾವು ಮದುವೆಯಾಗ ಬೇಕೆಂದಿದ್ದೇವೆ ಎನ್ನುವ ವಿಷಯವನ್ನು ಬಹಳ ಗೋಪ್ಯವಾಗಿಟ್ಟರು. ಇವರ ರಹಸ್ಯದ ಕೋಟೆಯನ್ನು ಒಡೆದು ಸತ್ಯ ಸಂಗತಿಯನ್ನು ತಿಳಿದುಕೊಂಡು ತೆಪ್ಪಗಿದ್ದ ವನು ಒಬ್ಬನೇ ಅವನು ಅನಂತು.

* * * *

ಮೈಸೂರು ರಾಜ್ಯಕ್ಕೆಲ್ಲಾ ಮೊದಲನೆಯವಳಾಗಿ ತೇರ್ಗಡೆಯಾಗಿದ್ದ ಗಂಗೆಗೆ ವಿದೇಶದಲ್ಲಿ ಉನ್ನತ ವಿದ್ಯಾಭ್ಯಾಸ ಮಾಡಿ ಬರಲು ಸರ್ಕಾರದಿಂದ ವಿದ್ಯಾರ್ಥಿ ವೇತನ ದೊರೆಯಿತು. ತನಗೆ ತಿಳಿದ ಕೂಡಲೆ ಗಂಗ ವಿಷಯವನ್ನು ಕಾಗದದ ಮೂಲಕ ವಿಶ್ವನಾಥನಿಗೆ ತಿಳಿಸಿದಳು. ಗಂಗಳ ಕಾಗದವನ್ನು ವಿಶ್ವ ನೂರೆಂಟು ಬಾರಿ ಓದಿಕೊಂಡು ಹಿಗ್ಗಿದ.

"ಅಣ್ಣಾ...." ಮೇಜಿನ ಮೇಲಿದ್ದ ದೀಪದ ಕೆಳಗೆ ಪುಸ್ತಕವನ್ನಿಟ್ಟುಕೊಂಡು ಓದುತ್ತಾ ಕುಳಿತಿದ್ದ ವೆಂಕಟರಾಮಯ್ಯನವರು ಮಗನ ಕರೆಗೆ ತಲೆ ಎತ್ತಿದರು.

"ಬಾ ವಿಶ್ವ...."

"ಅಣ್ಣ....ನಾನು ವೈದ್ಯನಾಗಬೇಕೆಂದು ನಿನಗೆ ಬಹಳ ಆಸೆಯಿತ್ತು.... ನನಗೆ ಬೇಕಿಲ್ಲದಿದ್ದರೂ ನಿನ್ನಾಸೆಯನ್ನು ನೆರವೇರಿಸಿದೆ. ಈಗ ನನ್ನದೊಂದು ಅಪೇಕ್ಷೆಯನ್ನು ನಡೆಸಿಕೊಡುತ್ತೀರ ಅಣ್ಣ...."

ವಿಶ್ವ ತಂದೆಯ ಬಳಿ ನಿಂತು ದೈನ್ಯದಿಂದ ಅಂಗಲಾಚಿದ.

"ಅದೇನು ಬಾಯಿಬಿಟ್ಟು ಹೇಳಬಾರದೆ?"

"ನನಗೆ ಹತ್ತು ಸಾವಿರ ರೂಪಾಯಿ ಕೊಡುತ್ತೀರಾ?"

"ಹತ್ತು ಸಾವಿರ! ಯಾಕೆ?" ವೆಂಕಟರಾಮಯ್ಯನವರ ಪೊದೆ ಹುಬ್ಬಿನ ಕೆಳಗೆ ಕಾಣಿಸದಂತಿದ್ದ ಕಣ್ಣುಗಳೂ ವಿಶ್ವನ ಕಣ್ಣಿಗೆ ಕಾಣಿಸಿಕೊಂಡವು.

"ಉನ್ನತ ವಿದ್ಯಾಭ್ಯಾಸಕ್ಕಾಗಿ ನಾನು ವಿದೇಶಕ್ಕೆ ಹೋಗಿಬರೋಣವೆಂದು ಹೊಂಡಿದ್ದೇನೆ ಅಣ್ಣ. ಆರು ಜನ ನನ್ನ ಸಹಪಾಠಿಗಳಾಗಿದ್ದವರು ಮುಂದಿನ ತಿಂಗಳು ಅಮೇರಿಕಾಕ್ಕೆ ವಿಮಾನದಲ್ಲಿ ಹೊರಡುವವರಾಗಿದ್ದಾರೆ...."

"ವಿಶ್ವ....ನೀನು ಮದುವೆ ಮಾಡಿಕೊಂಡ ಮೇಲೆ ಅಮೇರಿಕಾಕ್ಕೆ ಹೋಗ ಬಾರದೆ? ನಿನಗೆ ಹಣ ಕೊಡಲು ನಾನೇನು ಹಿಂದೇಟು ಹೊಡೆಯುತ್ತಿಲ್ಲ....ಆದರೆ ವಿದೇಶದಲ್ಲಿರುವ ತರುಣಿಯರ ಬೆಡಗು ಬಿನ್ನಾಣಕ್ಕೆ, ಕೆಂಪು ಬಣ್ಣಕ್ಕೆ ನೀನು ಮೈ ಮರೆತು ಅಲ್ಲಿಯ ಹುಡುಗಿಯೊಬ್ಬಳನ್ನು ಮದುವೆಯಾಗಿ, ನನ್ನನ್ನೂ, ನಿನ್ನನ್ನೂ, ಸಾಕಿ ಸಲುಹಿದ ಭಾರತಮಾತೆಯನ್ನೂ ಮರೆತು ವಿದೇಶದಲ್ಲೇ ನೆಲೆಸಿಬಿಟ್ಟರೆ ನನ್ನ ಗತಿಯೇನು?" ವೆಂಕಟರಾಮಯ್ಯನವರು ತಮಗಿಂತ ಒಂದು ಅಡಿ ಎತ್ತರ ವಾಗಿ ಬೆಳೆದು ನಿಂತಿರುವ ಒಬ್ಬನೇ ಮಗನಾದ ವಿಶ್ವನನ್ನು ಅಕ್ಕರೆಯಿಂದ ನೋಡುತ್ತಾ ಹೇಳಿದರು.

"ನಾನು ಭಾರತೀಯ....ನಾನೆಂದಿಗೂ ವಿದೇಶದಲ್ಲಿ ನೆಲಸಲಾರೆ ಅಣ್ಣಾ...."

"ಏನು ವಿಶ್ವ?"

"ಅಮ್ಮನ ಭಾವಚಿತ್ರವನ್ನು ಮುಟ್ಟಿ ಪ್ರಮಾಣ ಮಾಡುತ್ತಿದ್ದೇನೆ. ಎರಡು ವರ್ಷದ ವಿದ್ಯಾಭ್ಯಾಸವನ್ನು ಮುಗಿಸಿದ ಕೂಡಲೆ ನಾನು ಭಾರತಕ್ಕೆ ಹಿಂತಿರುಗು ತ್ತೇನೆ. ಭಾರತೀಯಳನ್ನೇ ಮದುವೆಯಾಗುತ್ತೇನೆ...."

ವಿಶ್ವ ಗೋಡೆಯ ಮೇಲೆ ತೂಗುಹಾಕಿದ್ದ ತಾಯಿಯ ಭಾವಚಿತ್ರವನ್ನು ಮುಟ್ಟಿ ಪ್ರಮಾಣ ಮಾಡಿದ. ಅನಂತರ ನಿಧಾನವಾಗಿ ಹೆಜ್ಜೆ ಇಡುತ್ತಾ ತಂದೆ ಯನ್ನು ಅವನು ಸಮೀಪಿಸಿದ. ತಂದೆಯ ತೊಡೆಯ ಮೇಲಿದ್ದ ಕೈಯನ್ನು ತನ್ನ ಎರಡು ಕೈಗಳಿಂದಲೂ ತೆಗೆದುಕೊಳ್ಳುತ್ತಾ ವಿಶ್ವ ಹೇಳಿದ.

"ನಾನು ನಿಮಗೆ ಕೊಟ್ಟ ವಚನಕ್ಕೆ ಅಮ್ಮ ಸಾಕ್ಷಿಯಾಗಿದ್ದಾಳೆ...."

ಮಗನ ಮಾತು ತಂದೆಯ ಕಣ್ಣುಗಳಲ್ಲಿ ನೀರು ತರಿಸಿತು. ಅಳಿದ ಹೆಂಡತಿ ಯನ್ನು ನೆನೆದು ದುಃಖದಿಂದ ಅವರ ಹೃದಯ ಭಾರವಾಯಿತು. ಆದರೆ ಎದುರಿಗೆ ನಿಂತಿದ್ದ ಮುತ್ತಿನಂತಹ ಮಗನನ್ನು ನೋಡಿದ ಕೂಡಲೆ ಅವರ ಹೃದಯದ ನೋವು ಮರೆಯಾಯಿತು.

"ಅಣ್ಣ...."

"ನಿನ್ನ ಮನಸ್ಸಿನಲ್ಲಿರುವುದನ್ನು ಹೇಳು ವಿಶ್ವ...."

ತಂದೆಯ ಪ್ರೋತ್ಸಾಹದ ನುಡಿ ವಿಶ್ವನ ಬಾಯಿ ತೆರೆಸಿತು. "ನಾನು ಭಾರತೀಯಳನ್ನೇ....ಬ್ರಾಹ್ಮಣ ಕನ್ಯೆಯನ್ನೇ ವಿವಾಹವಾಗುತ್ತೇನೆ. ಆದರೆ ನಾನು ನನ್ನ ಬಾಳಗೆಳತಿಯನ್ನು ಹುಡುಕಿಕೊಳ್ಳುತ್ತೇನೆ. ನಾನು ಇಷ್ಟಪಟ್ಟ ಹುಡುಗಿಯನ್ನು ನೀವು ಸಂತೋಷದಿಂದ ನಿಮ್ಮ ಸೊಸೆಯನ್ನಾಗಿ ಸ್ವೀಕರಿಸಬೇಕು"

"ನಿನ್ನಾಸೆಗೆ ಖಂಡಿತವಾಗಿ ನಾನು ಅಡ್ಡಿ ಬರುವುದಿಲ್ಲ ವಿಶ್ವ....ಆಗಲೇ ಹುಡುಗಿಯನ್ನು ಹುಡುಕಿಟ್ಟಿದ್ದೀಯಾ ?" ವೆಂಕಟರಾಮಯ್ಯನವರು ಮಗನ ಕಡೆ ಓರೆ ನೋಟ ಬೀರಿದರು.

"ಹಾಗೇನು ಇಲ್ಲ....ಮದುವೆಯ ವಿಷಯದಲ್ಲಿ ನನಗೆ ಪೂರ್ಣ ಸ್ವಾತಂತ್ರ ಕೊಡಬೇಕೆಂದು ಹೇಳಿದೆ ಅಷ್ಟೆ. ನಾನು ವಿದೇಶದಿಂದ ತಾಯ್ನಾಡಿಗೆ ಮರಳಿ ಬಂದ ಮೇಲೆ ತಾನೆ ಮದುವೆಯ ಯೋಚನೆ...."

* * * *

ವಿಶ್ವನಾಥ, ಗಂಗ ಇಬ್ಬರೂ ಒಂದೇ ವಿಮಾನದಲ್ಲಿ ಕುಳಿತು ಭಾರತದಿಂದ ಅಮೇರಿಕಾಕ್ಕೆ ಪ್ರಯಾಣ ಮಾಡಲು ನಿಶ್ಚಯಿಸಿದರು. ತಾವಿಬ್ಬರೂ ವಿದೇಶಕ್ಕೆ ಹೊರಡುವ ದಿವಸವನ್ನು ಬೊಂಬಾಯಿಯಲ್ಲಿ ಕೆಲಸಮಾಡುತ್ತಿದ್ದ ಅನಂತರಾಮು ವಿಗೆ ತಿಳಿಸುವುದನ್ನು ವಿಶ್ವ ಮರೆಯಲಿಲ್ಲ. ಅಚ್ಚುಮೆಚ್ಚಿನ ಗೆಳೆಯನನ್ನು ತಾಯ್ನಾಡನ್ನು ಬಿಟ್ಟು ಹೋಗುವ ಮುನ್ನ ಒಂದು ಬಾರಿ ನೋಡಿಹೋಗುವ ಚಪಲ ವಿಶ್ವನಿಗೆ. ಉನ್ನತ ವಿದ್ಯಾಭ್ಯಾಸಕ್ಕಾಗಿ ವಿದೇಶಕ್ಕೆ ಪ್ರಯಾಣ ಮಾಡಲು ಗಂಗ ಸಕಲ ಸಿದ್ಧತೆಗಳನ್ನೂ ಮಾಡಿಕೊಂಡಳು. ಅಮೇರಿಕಾದಲ್ಲಿ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡು ತನ್ನ ಕುಂಟುವ ಕಾಲನ್ನು ಸರಿಪಡಿಸಿಕೊಳ್ಳಬಹುದೆಂಬ ದೂರದ ಆಸೆ ಗಂಗೆಗಿತ್ತು. ಕುಂಟಿಯಾಗಿ ವಿಶ್ವನಾಥನ ಪತ್ನಿಯೆನಿಸಿಕೊಳ್ಳುವ ಬಯಕೆ ಅವಳಿಗಿರಲಿಲ್ಲ. ಆದುದರಿಂದಲೇ ಅಮೇರಿಕಾದಿಂದ ಮರಳಿ ತಾಯ್ನಾಡಿಗೆ ಬರುವ ವರೆಗೂ ಮದುವೆಯಾಗಬಾರದೆಂದು ಗಂಗ ಮನಸ್ಸಿನಲ್ಲೇ ನಿರ್ಧರಿಸಿಕೊಂಡಿದ್ದಳು. ತಾನು ಕುಂಟಿಯೆಂದು ತಿಳಿದಿದ್ದರೂ ನಿಶ್ಚಲ ಮನಸ್ಸಿನಿಂದ, ಪರಿಶುದ್ಧವಾದ ಪ್ರೇಮದಿಂದ ಕೈಹಿಡಿಯಲು ವಿಶ್ವನಾಥ ಕಾಯಾ, ವಾಚಾ, ಮನಸಾ ಸಿದ್ಧ ನಾಗಿರುವನೆಂಬ ವಿಷಯ ಗಂಗಳಿಗೆ ತಿಳಿದಿತ್ತು. ಆದರೂ ಅವಳ ಅಂತರಾತ್ಮ ಅವನನ್ನು ಮದುವೆಯಾಗಲು ಪೂರ್ಣ ಸಮ್ಮತಿಯನ್ನಿತ್ತಿರಲಿಲ್ಲ. ವಿಮಾನ ನಿಲ್ದಾಣದಲ್ಲಿ ನೂರಾರು ಜನರ ನಡುವೆ ಪುಟ್ಟದಾಗಿದ್ದರೂ ಮುದ್ದಾದ ಮುಖದ ಒಡತಿ ಗಂಗೆಯನ್ನು ಹುಡುಕುವುದು ವಿಶ್ವನಿಗೆ ಹೆಚ್ಚು ಕಷ್ಟವಾಗಲಿಲ್ಲ.

"ಇದೇನು ವಿಶ್ವನಾಥ್....ನೀವಿಲ್ಲಿ ?" ವಿಶ್ವನಾಥನನ್ನು ನೋಡಿದ ಕೂಡಲೆ ಗಂಗ ಆಶ್ಚರ್ಯದಿಂದ ಕಣ್ಣರಳಿಸಿದಳು. ಅದೇ ವಿಮಾನದಲ್ಲಿ, ತನ್ನ ಸಂಗಡ ವಿಶ್ವ ನಾಥನೂ ವಿದೇಶಕ್ಕೆ ಪ್ರಯಾಣ ಮಾಡುವನೆಂದು ಗಂಗೆಗೆ ತಿಳಿದಿದ್ದರೂ, ಮುಗ್ಧ ಳಾಗಿ ಏನೂ ಅರಿಯದವಳಂತೆ ನಟಿಸಿದಳು. ವಿದ್ಯಾಭ್ಯಾಸ ಮುಗಿಸಿ ತಾಯ್ನಾಡಿಗೆ

ಹಿಂತಿರುಗಿದ ಮೇಲೆ ತನ್ನ ಮದುವೆಯ ವಿಷಯವನ್ನು ತಂದೆತಾಯಿಗಳಿಗೆ ತಿಳಿಸ ಬೇಕೆಂದು ಗಂಗ ನಿರ್ಧರಿಸಿಕೊಂಡಿದ್ದಳು.

"ನಾನು ಏಳು ಘಂಟೆಗೆ ಹೊರಡುವ ವಿಮಾನದಲ್ಲಿ ಅಮೇರಿಕಾಕ್ಕೆ ಪ್ರಯಾಣ ಮಾಡುತ್ತೇನೆ...."

"ನಿಜವಾಗಿ? ಗಂಗ ಒಂಟಿಯಾಗಿ ಅಪರಿಚಿತರೊಂದಿಗೆ ಅಷ್ಟು ದೂರ ಪ್ರಯಾಣ ಮಾಡಬೇಕಲ್ಲಾ ಎಂದೂ ಹಗಲೂ ಇರುಳೂ ನಾನು ಚಿಂತಿಸುತ್ತಿದ್ದೆ. ಅವಳಿಗೆ ನಿಮ್ಮ ಜೊತೆ ಸಿಕ್ಕಿದ್ದು ಬಹಳ ಸಂತೋಷ. ಅವಳ ಸಂಪೂರ್ಣ ಜವಾಬ್ದಾರಿಯನ್ನು ನಿಮ್ಮ ಹೆಗಲ ಮೇಲೆ ಹೊರಿಸಿ ನಾನು ನಿಶ್ಚಿಂತೆಯಿಂದಿರು ತ್ತೇನೆ...." ಮಾಧವ ವಿಶ್ವನಾಥನ ಕೈ ಹಿಡಿದು ಹೇಳಿದ.

"ನಿಮ್ಮ ಮಗಳ ವಿಷಯವಾಗಿ ಸ್ವಲ್ಪವೂ ಯೋಚನೆ ಮಾಡಬೇಡಿ....ಓ.... ಅನಂತು ಬರ್‍ತಾ ಇದಾನೆ!" ಬೇಗ ಬೇಗ ಹೆಜ್ಜೆಹಾಕಿ ತಮ್ಮ ಕಡೆ ನಡೆದು ಬರುತ್ತಿದ್ದ ಅನಂತರಾಮುವನ್ನು ನೋಡಿ ವಿಶ್ವನ ಎದೆ ತುಂಬಿ ಬಂದಿತು.

"ಅನಂತೂ....ನಿನ್ನನ್ನು ನೋಡದೆ ಹೊರಡಬೇಕಾಗುವುದೇನೊ ಎಂದು ದುಃಖಿಸುತ್ತಿದ್ದೆ...." ವಿಶ್ವ ಅನಂತರಾಮುನ ಕೈಗಳನ್ನು ವಿಶ್ವಾಸದಿಂದ ಹಿಡಿದು ಕೊಂಡ.

"ಇವರು ನಮ್ಮ ತಂದೆ....ಈಕೆ ನನ್ನ ಸಹಪಾಠಿಯಾಗಿದ್ದವರು....ಗಂಗ.... ವಿದ್ಯಾಭ್ಯಾಸಕ್ಕಾಗಿ ಅಮೇರಿಕಾಕ್ಕೆ ಹೊರಟಿದ್ದಾರೆ...."

ವಿಶ್ವನಾಥ ತಂದೆಗೆ ಗಂಗಳನ್ನು ಪರಿಚಯ ಮಾಡಿಕೊಟ್ಟ.

"ನಮಸ್ಕಾರ....ನಿಮ್ಮನ್ನು ನೋಡಿಲ್ಲದೆ ಇದ್ದರೂ ವಿಶ್ವ ನಿಮ್ಮ ವಿಷಯ ವನ್ನೆಲ್ಲಾ ಹೇಳಿಬಿಟ್ಟಿದ್ದಾನೆ. ನಿಮ್ಮನ್ನು ಎಷ್ಟು ಹೊಗಳಿದರೂ ಅವನಿಗ ತೃಪ್ತಿಯಿಲ್ಲ."

ಮಾಧವ ವಿಶ್ವನಾಥನನ್ನು ನೋಡುತ್ತಾ ಕೇಳಿದ.

"ಇವರು ನಿಮ್ಮ ತಂದೆಯೇ ವಿಶ್ವನಾಥ?"

"ಹೌದು....ನಮ್ಮ ತಂದೆಯನ್ನು ನಿಮಗೆ ಪರಿಚಯ ಮಾಡಿಸುತ್ತೇನೆ.... ಅಣ್ಣಾ....ಇವರು ಮಾಧವರಾವ್....ಮಂಡ್ಯದಲ್ಲಿ ಸುಪ್ರಸಿದ್ಧ ವಕೀಲರಾಗಿ ದ್ದಾರೆ....ನನ್ನ ಸಹಪಾಠಿ ಗಂಗಳ ತಂದೆ...."

"ನಿಮ್ಮ ಪರಿಚಯವಾದದ್ದು ತುಂಬಾ ಸಂತೋಷ...." ಮಾಧವ ವಿಶ್ವ ನಾಥನ ತಂದೆಯ ಕೈ ಹಿಡಿದು ಕುಲುಕಿದ. ದೂರದೇಶಕ್ಕೆ ಮಗಳು ಹೊರಟು

ಹೋಗುವಳಲ್ಲಾ ಎಂಬ ಕೊರಗಿನಿಂದ ಕುಮುದ ಮುಖ ಬಾಡಿಸಿಕೊಂಡು ನಿಂತಿದ್ದಳು.

ವಿಶ್ವ, ಗಂಗ ಹಿರಿಯರ ಆಶೀರ್ವಾದಗಳನ್ನು, ಎಲ್ಲರ ಶುಭಾಶಯಗಳನ್ನು ಪಡೆದು ತಮ್ಮನ್ನು ಹೊತ್ತು ವಿದೇಶಕ್ಕೆ ಪ್ರಯಾಣ ಮಾಡಲು ಸಿದ್ಧವಾಗಿರುವ ವಿಮಾನವನ್ನು ಹತ್ತಿದ್ದರು. ಗಾಜಿನ ಕಿಟಕಿಯ ಬಳಿ ಕುಳಿತಿದ್ದ ಗಂಗ ನೆಲದ ಮೇಲೆ ಬೊಂಬೆಗಳಂತೆ ಕಾಣಿಸುತ್ತಿದ್ದ ತಂದೆತಾಯಿಗಳಿಗೆ ವಿಮಾನ ಹೊರಡುವವರೆಗೂ ಕೈ ಬೀಸುತ್ತಿದ್ದಳು. ಅವರು ಕಾಣಿಸದಂತಾದಾಗ ಕಣ್ಣೀರಿನಿಂದ ಅವಳ ಕಣ್ಣುಗಳು ಮಂಜಾದವು. ಪಕ್ಕದಲ್ಲಿ ಕುಳಿತಿದ್ದ ವಿಶ್ವ ಅವಳ ಕೈಯ್ಯನ್ನು ತನ್ನ ಕೈಗೆ ತೆಗೆದುಕೊಂಡ. ಪ್ರೀತಿಯ ಮಗನನ್ನು ಹೊತ್ತ ವಿಮಾನ ಹಕ್ಕಿಯಂತೆ ದೂರದಲ್ಲಿ ಹಾರಿ ಹೋಗುತ್ತಿರುವುದನ್ನೇ ನೋಡುತ್ತಿದ್ದ ವೆಂಕಟರಾಮಯ್ಯನವರು ಕರವಸ್ತ್ರದಿಂದ ತಮ್ಮ ದೊಡ್ಡ ಮೂಗನ್ನು ತಿಕ್ಕಿಕೊಂಡರು. ಅನಂತು ಎರಡು ಹೆಜ್ಜೆ ಮುಂದಿಟ್ಟು ಮಾಧವ, ಕುಮುದರ ನಡುವೆ ತಲೆ ಹಾಕಿ ಪಿಸುಗುಟ್ಟಿದ.

"ವಿಶ್ವನಾಥ, ಗಂಗ ಇಬ್ಬರೂ ವಿದೇಶದಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಭಾರತಕ್ಕೆ ಹಿಂತಿರುಗಿದ ಕೂಡಲೇ ನಮಗೆಲ್ಲರಿಗೂ ಮದುವೆಯ ಊಟ ಹಾಕಿಸುತ್ತಾರೆ...." ರಹಸ್ಯದ ಮೊಟ್ಟೆಯನ್ನು ಅನಂತು ಒಡೆದು ಹಾಕಿದ.

"ಅಂದರೆ ?"

ಮಾಧವ ಆಶ್ಚರ್ಯದಿಂದ ಅನಂತರಾಮುವಿನ ಕಡೆ ತಿರುಗಿ ಪ್ರಶ್ನಿಸಿದ.

"ವಿಶ್ವನಾಥನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು ನಿಮಗೆ ಇಷ್ಟವಿಲ್ಲವೆ?"

"ನಿನ್ನ ಮಾತು ನಿಜವೆ ?"

ಸಂಭ್ರಮ ಹಾಗೂ ಆಶ್ಚರ್ಯ ಬೆರೆತ ಧ್ವನಿಯಲ್ಲಿ ಮಾಧವ ಕೇಳಿದ.

ನೀಲಿ ಆಗಸದಲ್ಲಿ ಕರಿಯ ಚುಕ್ಕಿಯಂತೆ ಕಾಣಿಸುತ್ತಿದ್ದ ವಿಮಾನವನ್ನೇ ಎವೆಯಿಕ್ಕದೆ ನೋಡುತ್ತಿದ್ದ ಅನಂತು "ಹೂಂ" ಗುಟ್ಟಿದ.

---o---

Cover Printed at Bhaskar Printers, B-2 Phone: 75467